# ಶಾಮಣ್ಣನ ಸಾಹಸ

(ಏಕಾಂಕ ಪ್ರಹಸನ)

ಲೇಖಕರು

ಶ್ರೀ ಕ್ಷೀರಸಾಗರ

ಎರಡನೆಯ ಮುದ್ರಣ
(ಸಂಸ್ಕರಿಸಿದುದು)

ಪ್ರಕಾಶಕರು

ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು ನಗರ

೧೯೪೬

ಮೊದಲನೆಯ ಮುದ್ರಣ: ೧೯೩೮
ಎರಡನೆಯ ಮುದ್ರಣ: ೧೯೪೬

ಈ ನಾಟಕವು
ಆಲ್ ಇಂಡಿಯಾ ರೇಡಿಯೋ, ಮದ್ರಾಸ್—ಏಪ್ರಿಲ್, ೧೯೪೩
ಆಕಾಶವಾಣಿ, ಮೈಸೂರು —೧೫ ಜುಲೈ ೧೯೪೪,
,, ,, —೧೭ ಫೆಬ್ರುವರಿ, ೧೯೪
ಈ ಪ್ರಸಾರಗಳಲ್ಲಿ ಬಂದಿದೆ

ಇದರ ಪ್ರಥಮ ಪ್ರದರ್ಶನವು ೧೯೩೭ರಲ್ಲಿ ಬೆಂಗಳೂ ಇಂಟರ್‌ಮೀಡಿಯೆಟ್ ಕಾಲೇಜು ಸಂಘದಲ್ಲಿ ನಡೆಯಿತು.

ವ್ಯಾಪ್ತಿ: ಸುಮಾರು ಒಂದು ಘಂಟೆ

ಎರಡನೆಯ ಮುದ್ರಣ:
೧೦೦೦ ಪ್ರತಿಗಳು

ಬೆಲೆ:
ಹತ್ತಾಣೆ

## ಕಥಾಸಾರಾಂಶ

ಗಂಗಮ್ಮನ ಕೈಗೆ ಬಿದ್ದ ದುಡ್ಡು ವಾಪಸು ಬಂದೀತೆ? ಎಲ್ಲಿಯ ಮಾತು! ಅದು ಒಡವೆ ಸೀರೆಗಳಿಗಾಗಿ ಮೀಸಲಾಗಿದ್ದಿತು. ಆದರೆ ಶಾಮಣ್ಣನಿಗೆ ಸಾಲಗಾರನ ತಗಾದೆ. ಹೆಂಡತಿಯ ವಶದಿಂದ ಹಣವನ್ನು ಹೊರಡಿಸಲು ಶಾಮಣ್ಣನು ವ್ಯರ್ಥವಾಗಿ ಅನೇಕ ಪ್ರಯತ್ನಗಳನ್ನು ಮಾಡಿದನು. ಕಡೆಗೆ ಅವನ ಸ್ನೇಹಿತ ಗುಂಡೂರಾಯನು ಹೂಡಿಸಿದ ತಂತ್ರದಿಂದ ಗಂಗಮ್ಮ ಎಡವಿದಳು, ಮುಗ್ಗರಿಸಿದಳು. ನಡೆಯುವವರು ಎಡವದೆ, ಮುಗ್ಗರಿಸದೆ, ಉಂಟೆ?

'ಎಲ್ಲರ ಮನೆ ದೋಸೆ ತೂತೇ!'

---

# ಸಿದ್ಧತೆ

---

## ಪಾತ್ರವಿವರ

೧. **ಶಾಮಣ್ಣ :** ಸುಮಾರು ಮೂವತ್ತೈದು ವಯಸ್ಸಿನ ಗಿಡ್ಡನೆಯ ಗುಮಾಸ್ತೆ. ಸಾಲದ ಹೊರೆಯಿಂದ ನೊಂದಿರುವನು. [ಕಚ್ಚೆ ಪಂಚೆ, ಬನಿಯನ್, ಸಾದಾ ಶಲ್ಯ.]

೨. **ಗಂಗಮ್ಮ :** ಶಾಮಣ್ಣನ ಧರ್ಮಪತ್ನಿ. ಗಂಡನಿಗಿಂತ ಎತ್ತರ ಜಾಸ್ತಿ. ಗಟ್ಟಿಗಿತ್ತಿ. [ಸಾದಾ ಸೀರೆ, ಜಾಕೆಟ್, ಅಡ್ಡ ಕುಂಕುಮ.]

೩. **ಗುಂಡೂರಾಯ :** ಶಾಮಣ್ಣನ ಸ್ನೇಹಿತ. ಗುಮಾಸ್ತೆ. ಅದೇ ವಯಸ್ಸು. ಮೀಸೆ ಇಲ್ಲ. ಕ್ರಾಪ್ ಇದೆ. [ಕಚ್ಚೆಪಂಚೆ, ಕೋಟು, ಟೋಪಿ, ವಾಕಿಂಗ್ ಸ್ಟಿಕ್.]

೪. **ಪಾರ್ವತಮ್ಮ :** ಗುಂಡೂರಾಯನ ಧರ್ಮಪತ್ನಿ. ಗಟ್ಟಿಗಿತ್ತಿ. ಅಗಲವಾದ ಮುಖ. ನಿಧಾನವಾಗಿ ಒತ್ತಿ ಒತ್ತಿ ಮಾತನಾಡುವ ಶೈಲಿ. [ಸಾದಾ ಸೀರೆ, ಜಾಕೆಟ್, ದೊಡ್ಡದಾಗಿ ಅಡ್ಡಕುಂಕುಮ.]

೫. **ಸಾಹುಕಾರ :** ಶಾಮಣ್ಣನಿಗೆ ಬಾಕಿ ಕೊಟ್ಟಿರುವನು. ಕನ್ನಡ ಭಾಷೆ ಚನ್ನಾಗಿ ಬಾರದು. ಯಾವ ಜಾತಿಯೋ ಪತ್ತೆ ಇಲ್ಲ. [ಲಾಂಗ್‌ಕೋಟ್ (ಕಶಿ ಉಳ್ಳದ್ದು), ಮಾರ್ವಾಡಿ ನಮೂನೆ ರುಮಾಲು.]

# ಸ್ಥಳ

ಶಾಮಣ್ಣನ ಮನೆಯ ಪಡಸಾಲೆ. ಅದರ ನಕ್ಷೆ ಹೀಗಿದೆ:




**ಅ:** ಹೊರಬಾಗಿಲು.

**ಇ:** ಒಳಬಾಗಿಲು.

**ಉ:** ಕೋಣೆಯ ಬಾಗಿಲು.

**ಕ, ಚ:** ವೆನೆಸ್ತಾ ಕುರ್ಚಿಗಳು.

**ಟ:** ಮೇಜು.

**ತ:** ಉಡುಪಿನ ನಿಲುವು. ಇದರ ಮೇಲೆ ಒಂದು ಟವಲು ಮತ್ತು ಕಿರುಬೆರಳು ಗಾತ್ರದ, ಮಾರುದ್ದದ, ಒಂದು ನೂಲುದಾರ ಇವೆ.

**ಯ, ರ, ಲ:** ಸ್ಥಳಸಂಕೇತಗಳು.

[ ಎದುರು ಗೋಡೆಗೆ ಒಂದು ರವಿವರ್ಮ ಚಿತ್ರಪಟ ಹಾಕಿದೆ.]

ನಾಟಕದಲ್ಲಿ ಅಲ್ಲಲ್ಲಿ ಕೊಟ್ಟಿರುವ ಅಕ್ಷರ ಸಂಕೇತಗಳು ಈ ನಕ್ಷೆಗೆ ಅನ್ವಯಿಸುತ್ತವೆ.

## ಕಾಲ

ಭಾನುವಾರ ಬೆಳಗ್ಗೆ ೧೦ ಘಂಟೆಯಿಂದ ಸ್ವಲ್ಪಕಾಲ.

---

## ತೆರೆಯ ಹಿಂದೆ

ನೋಟುಗಳು, ಬಾಕೀ ಲೆಕ್ಕದ ದೊಡ್ಡಬುಕ್ಕು, ಅದರಲ್ಲಿ ಒಂದು ಪತ್ರ, ಇಬ್ಬರಿಗೆ ತಿಂಡಿ-ಕಾಫಿ, ನೀರು ತುಂಬಿದ ಬಿಂದಿಗೆ, ಗೋಪುರವಾಗಿ ಉಪ್ಪು ತುಂಬಿದ ಲೋಟ, ಮೂರು ಕಾವೀ ಧೋತ್ರಗಳು, ರುದ್ರಾಕ್ಷಿಯ ಜಪಮಾಲೆ, ಪಾದುಕೆ, ಕಮಂಡಲದಲ್ಲಿ ನೀರು, ಎರಡು ತಟ್ಟೆಗಳಲ್ಲಿ ಪೂಜಾ ಸಾಮಗ್ರಿ. ಒಂದು ತಪೇಲು

---

# ಶಾಮಣ್ಣನ ಸಾಹಸ

---

[ ತೆರೆ ಏಳುವುದು ]

## [ಪ್ರವೇಶ (ಇ) : ಗಂಗಮ್ಮ ಮತ್ತು ಶಾಮಣ್ಣ]

[ದೃಢಪ್ರತಿಜ್ಞಳಾದ ಗಂಗಮ್ಮನನ್ನು ಶಾಮಣ್ಣ ದೈನ್ಯದಿಂದ ಹಿಂಬಾಲಿಸುವನು.]

**ಗಂಗಮ್ಮ**

[ತಲೆಯನ್ನೂ ಕೈಯನ್ನೂ ಅಲ್ಲಾಡಿಸುತ್ತ] ಆಗೋದಿಲ್ಲ, ಖಂಡಿತ ಆಗೋದಿಲ್ಲ, ಉಹುಂ. [ಎನ್ನುತ್ತ ಮೇಜಿನ ಸಮೀಪಕ್ಕೆ ಬರುತ್ತಿರುವಳು.]

**ಶಾಮಣ್ಣ**

[ದೈನ್ಯದಿಂದ ಹಿಂಬಾಲಿಸುತ್ತ] ನನ್ನ ಮಾತು ಸ್ವಲ್ಪ ಲಾಲ್ಸೂ ಅಂದ್ರೆ ಏ............

**ಗಂಗಮ್ಮ**

[ (ಲ) ಬಳಿ ನಿಂತು] ಅಹಹಹ, ಏನು ವಿನಯ, ಎಷ್ಟು ಜಾಣತನ! ........ಗ್ಗೊತ್ತಿದೆ, ಸ್ಸುಂನಿರಿ.

**ಶಾಮಣ್ಣ**

ಹಾಗೆ ಮಾಡಬೇಡ. ನಾ ಹೇಳೋ ವಿಷ್ಯ ತಕೋ. ಸ್ವಲ್ಪ ಮನಸು ಮಾಡು........ಲಾಲ್ಸು.

ಗಂಗಮ್ಮ

ಈಗ ಎಂಟು ದಿನದಿಂದ ಲಾಲ್ಸೀ ಲಾಲ್ಸೀ ಕಿವಿ ತೂತು ಬಿದ್ಹೋಗಿದೆ. ನನಗ್ಗೊತ್ತಿದೆ, ಲಾಲಸ್ಬೇಕಾದ್ದೇನೂ ಇಲ್ಲ. ನನ್ನ ಟ್ರಂಕಿನಲ್ಲಿರೋ ನೂರು ರೂಪಾಯಿ ವಿಷ್ಯಾ ತಾನೇ?

ಶಾಮಣ್ಣ

[ತಲೆಯ ಹಿಂಭಾಗವನ್ನು ಮುಟ್ಟಿಕೊಳ್ಳುತ್ತ] ನೂರು ರೂಪಾಯೀ ಅಂದ್ರೇ ಏ,........

ಗಂಗಮ್ಮ

ಅಂದ್ರೇ ಏ, ಹತ್ತು ರೂಪಾಯಿನದು ಹತ್ತು ನೋಟುಗಳು, ಗೊತ್ತಿದೆ. ಅದನ್ನೊಕ್ಟ್ರಿ ತಕೊಂಡ್ಹೋಗಿ ಸಾಹುಕಾರನ ಸಾಲ ಕ್ಕೊಟ್ಟುಬರ್ತೀರಿ. ಇಷ್ಟೇ ತಾನೇ? ನಾನು ಕೊಡೋದಿಲ್ಲ. ಗುಂಡೂರಾಯರ ಮನೇ ಪಾರ್ವತಮ್ಮ ಸಹ 'ಒಂದು ಸೀರೇನೋ ಒಡವೇನೋ ತರಿಸಿಕೊಳ್ಳೀ, ಸಾಲ ಇದ್ದೇ ಇದೆ' ಅಂತ ಹೇಳ್ತಾಳೆ. ........ಅಲ್ಲಾ, ಈಗ ಮೂರು ದಿನದಿಂದ ಸಿಟ್ಟುಮಾಡಿಕೊಂಡು ನನ್ನ ಮಾತ್ನಾಡಿಸದೆ ಮೌನವ್ರತ ಮಾಡಿದಿರಿ! ಈ ಹೊತ್ತು ಭಾನುವಾರ, ಆಫೀಸಿಗೆ ರಜಾಂತ ಷುರು ಮಾಡಿದಿರೇನೋ ವಾಗ್ವಾದ! ಆಗೋ ಮಾತಲ್ಲ, ಗೊತ್ತಾಯ್ತೋ? ........ ಉಹ್ಹಂ, ಪುಣ್ಯಪುರುಷರ ಕೈಹಿಡಿದದ್ದಕ್ಕೇ........ಉಹ್ಹಂ, ........ಏನು ಸುಖ ........[ಎಂದು ಸೆರಗಿನ ಸಹಾಯದಿಂದ ದುಃಖಿಸುವಳು.]

ಶಾಮಣ್ಣ

ಸುಖ ಸುರಕೊಳ್ಳೋ ಮಾತೇ ನಾನಾಡೋದೀಗಾ.

ಗಂಗಮ್ಮ

ನಾನು ಸುರಕೊಳ್ಳೋಲ್ಲ.

ಶಾಮಣ್ಣ

ಅಯ್ಯೋ, ಹಾಗ್ಯಾಕ್ಮಾಡ್ತಿ, ಸುರಕೋಂದ್ರೇ.

ಗಂಗಮ್ಮ

ನಿಜವಾಗಿ ಸುರಕೊಳ್ಳೋ ಮಾತಾದ್ರೆ ಲಾಲಸ್ತೀನಿ.

ಶಾಮಣ್ಣ

ಸಾಹುಕಾರ್ರ ಹಾಳಾಗ್ಲಿ, ತಿಳೀತೇ?

ಗಂಗಮ್ಮ

ಅಗತ್ಯವಾಗಾಗ್ಲಿ.

ಶಾಮಣ್ಣ

[ಗೆಲುವಾಗಿ] ಪೇಟೇಲಿ ಸೀರೆ, ಒಡವೆ ನೋಡಿ ಬಂದಿದೀನಿ.

ಗಂಗಮ್ಮ

ಅದೇ—ಬೀದೀಲ್ಹೋಗೋವಾಗ ಕಣ್ಣಿರೋರಿಗೆಲ್ಲ ಕಾಣ್ಸುತ್ತೆ, ಆಚೆ ಈಚೆ ಅಂಗಡೀಲಿರೋದು.

ಶಾಮಣ್ಣ

ಹಾಗೆ ನೋಡ್ಲಿಲ್ಲಾ............

ಗಂಗಮ್ಮ

ಇನ್ನೇನ್ಕಿವೀಲ್ನೋಡಿದ್ರಾ? ಈ ನಿಮ್ಮ ಉಪಾಯಗೋಳ್ಲಾ ನನ್ನ

ಮುಂದೆ ನಡೆಯೋದಿಲ್ಲ. ಮೊದಲು ಸೀರೆ ಒಡವೆ ತಕ್ಕೊಂಡು ಬಂದು ಕೊಟ್ರೊ, ಆಮೇಲೆತ್ತಿ ರೂಪಾಯಿ ಮಾತನ್ನ.

ಶಾಮಣ್ಣ

ರೂಪಾಯಿ ಕೊಡೋತನಕ ಅವು ಮನೆಗೆ ಬರೋದಿಲ್ಲ.

ಗಂಗಮ್ಮ

ಅವು ಮನೆಗೆ ಬರೋತನಕ ರೂಪಾಯಿ ಕೊಡೋದಿಲ್ಲ.

ಶಾಮಣ್ಣ

ಬಿಡು ಹಾಗಾದ್ರೆ. 'ಮದುವೆ ಆಗೋತನಕ ಹುಚ್ಚು ಬಿಡೋದಿಲ್ಲ, ಹುಚ್ಚು ಬಿಡೋತನಕ ಮದುವೆ ಆಗೋದಿಲ್ಲ' ಅನ್ನೋ ಸಮಾಚಾರ. ಇಷ್ಟನುಮಾನವಾದ್ರೆ ಹ್ಯಾಗೆ? ನಾನಿನ್ನೇನ್ಮಾಡೇನು? ರೂಪಾಯಿ ಸಾಲಕ್ಕಟ್ರೋದಿಲ್ಲ, ನಿನಗೆ ಸೀರೆ ಒಡವೆ ತರ್ತೀನಿ ಅಂತ ನಿನ್ನ ಮಾತಿನಂತೇನೇ ಮನಸ್ಸು ಬದಲಾಯಿಸಿಕೊಂಡು ವಿಶ್ವಾಸದಿಂದ ಹೇಳಿದ್ರೂ ಒಪ್ಪದೆಹೋದ್ರೇ, ನಾನಿನ್ನೇನ್ಮಾಡ್ಲಿ?

ಗಂಗಮ್ಮ

ಹಾಗಾದರೆ ತಾಳಿ, ರೂಪಾಯಿ ತರ್ತೀನಿ.

[ ನಿರ್ಗಮ (ಇ) : ಗಂಗಮ್ಮ ]

ಶಾಮಣ್ಣ

[ತನ್ನಲ್ಲಿ] ಉಪಾಯ ಫಲಿಸ್ತು. ದುಡ್ಡು ಬಂದು ಕೈಗೆ ಬಿದ್ರೆ, ಸಧ್ಯ ಆ ಸಾಹುಕಾರನಿಗೆ ಕೊಟ್ಟುಬಿಡ್ತೇನೆ. ಬೀದೀಲಿ ಮಾನ ತೆಗೀ

ತಾನೆ! ಏನ್ಮಾಡ್ಲಿ? ಈ ತಾಟಕಿ ದುಡ್ಡು ಬಂದ ದಿನವೇ ಅದನ್ನ ಹೊಡೆದ್ಬಿಟ್ಟು ಗೋಳಾಡಸ್ತಿದಾಳಲ್ಲಾ.

[ ಪ್ರವೇಶ (ಇ) : ಗಂಗಮ್ಮ ]

[ ಗಂಗಮ್ಮ ನೋಟುಗಳನ್ನೆಣಸುತ್ತ ಪ್ರವೇಶಿಸಿ, (ಯ) ಎಂಬಲ್ಲಿ ನಿಲ್ಲುವಳು.]

**ಶಾಮಣ್ಣ**

[ಹೆಂಡತಿಯ ಕೈಯಲ್ಲಿರುವ ಹಣವನ್ನು ನೋಡಿ ಸಂತೋಷದಿಂದ ಸಮೀಪಕ್ಕೆ ಹೋಗುತ್ತ] ನಾನೇನ್ಮಾಡಿದ್ನೋ!........

**ಗಂಗಮ್ಮ**

ಏನ್ಹಾಗಂದ್ರಿ?

**ಶಾಮಣ್ಣ**

ಏನ್ಪುಣ್ಯ ಮಾಡಿದ್ನೋ, ನಿನ್ನಂಥಾ ಮಡದೀ........[ಎನ್ನುತ್ತ ಹಣಕ್ಕೆ ಕೈ ಹಾಕುವನು.]

**ಗಂಗಮ್ಮ**

ಹಾ! ದೂರ, ದೂರ........ನಾನೂ ಪೇಟೆಗೆ ಬರ್ತೀನಿ. ಅಂಗಡೀಲಿ ದುಡ್ಡು ಕೊಡ್ತೀನಿ.

**ಶಾಮಣ್ಣ**

[ನಿರಾಶೆಯಿಂದ] ಈಗ ಕೊಡೋದಿಲ್ವೇ! ........ [ಪುಸಲಾಯಿಸುತ್ತ] ನನ್ನ ಧರ್ಮಪತ್ನಿ ನೀನೂ........ಅಲ್ವೇ, ಅರ್ಧಾಂಗೀ ........

ಗಂಗವ್ವ

ಧರ್ಮಪತ್ನಿ! ನಾನೇನು ಧರ್ಮಕ್ಕಿದ್ದೀನೀಂತ ತಿಳುಕೊಂಡಿದೀರಾ ಈ ಮನೇಲೀ?........ ಅರ್ಧ ಅಂಗೀನಂತೆ, ಅರ್ಧ ಅಂಗಿ!

ಶಾಮಣ್ಣ

[ತನ್ನಲ್ಲಿ] ಈ ಶೂರ್ಪನಖಿ ಒಳ್ಳೇ ಮಾತಿಗೆ ಬಗ್ಗೋದಿಲ್ಲ. [ದೂರ ಸರಿದು, ಚಿರಳಾಡಿಸುತ್ತ] ಲೇ, ಸಿಗಿಧಾಕ್ಬಿಡ್ತೀನಿ, ಜೋಕೆ!

ಗಂಗವ್ವ

ನಿಮ್ಮ ಅರ್ಧ ಅಂಗೀನ ನೀವು ಸಿಗಿದಾನ್ನ ಹಾಕ್ಕೊಳ್ಳೀ, ಹರದಾನ್ನ ಹಾಕ್ಕೊಳ್ಳೀ, ನನ್ನ ಮಾತಾಡಿಸಬೇಡಿ. ಮೊದಲು ರೂಪಾಯಿ ಒಳಗಿಟ್ಟು ಬರ್ತೀನೆ. ಪರವಾ ಇಲ್ಲ, ಭಾಳಾ ಓಡ್ಸಿದ್ದೀರಿ ಬುದ್ಧಿ.

[ನಿರ್ಗಮ (ಇ) : ಗಂಗವ್ವ]

ಶಾಮಣ್ಣ

[ತನ್ನಲ್ಲಿ] ಈಗ ಎಂಟು ದಿನದಿಂದ ಎಲ್ಲಾ ವಿಧವಾದ ಉಪಾಯ ಗಳನ್ನೂ ಮಾಡಿದ್ದಾಯ್ತು. ಈಗ ಆಗಾತ್ಯ ಮಾಡಿನೋಡ್ತೀನೆ. ಅಲ್ಲೀಗೂ ಸರಿಹೋಗದೇ ಇದ್ರೇ, 'ದಂಡಂ ದಶಗುಣಂ ಭವೇತ್' ಇದ್ದೇ ಇದೆ.

[ಶಲ್ಯವನ್ನು ಕತ್ತಿಗೆ ಸುತ್ತಿಕೊಂಡು, ಕೈಗಳಿಂದ ಎಳೆದು ಹಿಡಿದು ಕೊಂಡು, ನೆಟ್ಟಗೆ ನಿಂತು, ತಲೆಯನ್ನು ಮೇಲಕ್ಕೆತ್ತಿ, ನೇಣುಹಾಕಿಕೊಳ್ಳುವಂತೆ ನಟಿಸುವನು.]

[ ಪ್ರವೇಶ (ಇ) : ಗಂಗವ್ವ ]

## ಗಂಗಮ್ಮ

[ತನ್ನಲ್ಲಿ] ಅಬ್ಬಬ್ಬಾ ! ಏನು ಆಗಾತ್ಯ ಈ ಗಂಡು ಜಾತಿ !!

## ಶಾಮಣ್ಣ

[ಕ್ಷೀಣಸ್ವರದಲ್ಲಿ] ನೇಣು ಹಾಕ್ಕೊಳ್ತೀನಿ ........ ಅ, ಅ, ಆ ........ ಎದೇ ವರೆಗೆ ಬಂತು ! ........ ಒ, ಓ, ಔ........ಕುತ್ತಿಗೇಲಿದೆ........ ಕೊಡ್ತಿಯೋ ಇಲ್ವೋ ಹೇಳು ಬೇಗ.

## ಗಂಗಮ್ಮ

ಕೊಡ್ತೇನೆ ತಾಳಿ. ಕೆಲಸಗಳನ್ನ ಸರಿಯಾಗಿ ಮಾಡಬೇಕು. ಆದ ಕ್ಯಾಕೆ ಯೋಚ್ನೆ ?

## ಶಾಮಣ್ಣ

[ಸಂತೋಷದಿಂದ ಶಲ್ಯವನ್ನು ಬಿಸುಟು] ಆಹಾ, ಮಾಡೋ ರೀತೀಲಿ ಮಾಡಬೇಕು. ಪ್ರಿಯೇ, ತೆಗೆದುಕೊಂಡು ಬಾ, ಹೋಗು. ಎಂಥಾ ಜಾಣೆ ನೀನೂ ! ಜಾಗ್ರತೆ ಹೋಗು.

## ಗಂಗಮ್ಮ

ಇಲ್ಲೇ ಇದೆ, ಪ್ರಿಯತಮಾ ! ಇಂಥಾ ಕಷ್ಟಕಾಲದಲ್ಲೂ ಸಹಾಯ ಮಾಡದೇ ಇದ್ರೆ, ನಾನಿದ್ದೂ ಪ್ರಯೋಜನ ಏನು ? [ (ತ) ನಿಲುವಿನ ಮೇಲಿರುವ ಹಗ್ಗವನ್ನು ತಂದು ಗಂಡನ ಕೈಮೇಲೆ ಬಿಸುಟು, (ಯ) ಎಂಬಲ್ಲಿ ನಿಲ್ಲುವಳು.]

## ಶಾಮಣ್ಣ

[ದಿಗ್ಭ್ರಾಂತನಾಗಿ] ಆ !.......... ಏನಿದೂ ! [ಎನ್ನುತ್ತ ಹಿಂದಕ್ಕೆ ಕುರ್ಚಿಯ ಮೇಲೆ ಕೂಲುವನು.]

### ಗಂಗಮ್ಮ

ಆದೇ?.........ಹಗ್ಗ, ಭದ್ರವಾಗಿದೆ. ಐನೂರು ಪೌಂಡಾದ್ರೂ ತಡೆಯುತ್ತೆ. ಸಾಲ್ದೇನೂ?... .. ಭಾಳಾ ಚುರುಕು, ಬುದ್ಧಿ! ..........

### ಶಾಮಣ್ಣ

[ಕೋಪದಿಂದ] ಇಗೋ ನೋಡು, ಇನ್ನು ಏಟು ಬೀಳುತ್ತೆ. ........... ಒಂದು ಬೆತ್ತವಾದ್ರೂ ಇಲ್ವಲ್ಲಾ .......... [ಸುತ್ತಲೂ ನೋಡಿ] ಈ ಕುರ್ಚೀನೇ ಆಯ್ತು.

[ ಎಂದು (ಚ) ಕುರ್ಚಿಯನ್ನೆಬ್ಬಿಸುವನು. ಕೈ ಉಳುಕುವುದು. ಕುರ್ಚಿಯನ್ನು ಕೈಬಿಟ್ಟು* ]

ಅಹಹಹ ! [ಎಂದು ಕೈ ಕೊಡವುತ್ತ, ಹಿಸುಕಿಕೊಳ್ಳುತ್ತ, ನೋವನ್ನು ನಟಿಸುತ್ತ, ಓಡಿಯಾಡುವನು.]

### ಗಂಗಮ್ಮ

ಕೈ ಉಳುಕಿತೋ?..........ಹಾಗೇ ಆಗ್ಬೇಕು.

---

* [ಅಥವಾ, ಗಂಗಮ್ಮ ಅವನಿಗಿಂತ ಎತ್ತರವಾದ ಆಳಾದ ಪಕ್ಷದಲ್ಲಿ, ಅವನು ಒಂದು ಬೆತ್ತದಿಂದ ಹೊಡೆಯುವುದಕ್ಕೆ ಹೋಗುವನು; ಆಕೆ ಬೆತ್ತವನ್ನು ಕಿತ್ತುಕೊಂಡು, ಗೋಡೆಯ ಮೇಲೆ ಅವನಿಗೆ ಎಟುಕದಂತಿರುವ ಎರಡು ಅಡ್ಡಮೊಳೆಗಳ ಮೇಲೆ ಇಡುವಳು; ಅಥವಾ ಮೇಲಕ್ಕೆ ಎತ್ತಿಹಿಡಿದುಕೊಂಡು ನಿಲ್ಲುವಳು. ಶಾಮಣ್ಣ ಬೆತ್ತವನ್ನು ಎಟುಕಿಸಿಕೊಳ್ಳುವುದಕ್ಕೆ ಎರಡು ಸಲ ನೆಗೆದು, ಹತಾಶನಾಗಿ, ಕೋಪ ಹೆಚ್ಚಿ, ಮೇಜಿನ ಮೇಲೆ ಕೈ ಕುಟ್ಟುವನು. ಅದರಿಂದ ಕೈ ಉಳುಕುವುದು.]

## [ ಪ್ರವೇಶ (ಅ) : ಸಾಹುಕಾರ ]

[ ಸಾಹುಕಾರನು ಲೆಕ್ಕದ ಬುಕ್ಕು, ಪತ್ರ ಸಮೇತ ಪ್ರವೇಶಿಸಿ, (ರ) ಎಂಬಲ್ಲಿ ನಿಲ್ಲುವನು. ]

[ ನೋವಿನಿಂದ ಓಡಿಯಾಡುತ್ತಿರುವ ಶಾಮಣ್ಣನು, ಸಾಹುಕಾರನು ಬಂದುದನ್ನು ಕಾಣದೆ, ಹಿಂದುಹಿಂದಾಗಿ ಹೋಗಿ ಅವನಿಗೆ ತಗುಲುವನು. ಕೂಡಲೇ ಗಾಬರಿಗೊಂಡು, ಅವನನ್ನೇ ನೋಡುತ್ತ, ಕೈ ಕೊಡವುವುದನ್ನು ಕ್ರಮೇಣ ಕಡಮೆಮಾಡುತ್ತ, ಹೆಂಡತಿಯ ಕಡೆಗೆ ಹೋಗುವನು. ]

### ಸಾಹುಕಾರ

ಹರೇ ರಾಂ ! ಇದೇನ್ ಬಂತ್, ಈ ಷೋಮೀಗೆ ! ಷಾಮಣ್ಣಾ, ಷಲಾಂ ದೇಖೋ ಲೆಕ್ಕದ್ ಬುಕ್ಕು ತಂದಿದಾದೀನೀ. [ಪುಸ್ತಕದ ಹಾಳೆಗಳಲ್ಲಿ ಶಾಮಣ್ಣನ ಲೆಕ್ಕವನ್ನು ಹುಡುಕುವನು.]

### ಶಾಮಣ್ಣ

[ಹೆಂಡತಿಗೆ] ವಸೂಲೀಗೆ ಬಂದೇಬಿಟ್ಟ ನಕ್ಷತ್ರಿಕ. ರೂಪಾಯಿ ಕೊಡು. ಮಾನ ಹೋಗುತ್ತೆ, ಸಮಯ ನೋಡು, ನಿನ್ನ ದಮ್ಮಯ್ಯ.

### ಗಂಗಮ್ಮ

[ಯೋಚಿಸಿ] ಅದಕ್ಕೇ, ಒಂದು ಉಪಾಯ ಹೇಳ್ತೀನಿ ಕೇಳಿ. ನೀವು ಅವಾಂತರ ಮಾಡ್ತಾ ಇದ್ದದ್ದನ್ನ ಅವನು ನೋಡಿದಾನೆ. ನಿಮಗೆ ಬುದ್ಧಿ ಸರಿಯಾಗಿಲ್ಲ ಅಂತ ಹೇಳಿ ಅವನ್ನ ಕಳಿಸಿಬಿಡ್ತೀನೆ. ನೀವೂ ಹಾಗೇ ನಟಿಸಿ.

### ಶಾಮಣ್ಣ

ಏನೂ ! ನನಗೆ ಹುಚ್ಚು ಹಿಡಿದಿದೇಂತ ಹೇಳ್ತೀಯಾ ?

ಗಂಗಮ್ಮ

ಇಲ್ದೇ ಇದ್ರೆ ಬಿಡಿ. ಅವನಿಗಿನ್ನೇನಾದ್ರೂ ನೆಪ ಹೇಳಿ ಕಳಿಸಿಬಿಡಿ.

ಶಾಮಣ್ಣ

ಅವನು ಹೋಗೋದಿಲ್ಲ. ಅವನಿಲ್ಲೀಗೆ ಬಂದಿರೋದು ಇದು ತೊಂಭತ್ತೊಂಭತ್ನೇ ಸಲ—ನಿನಗ್ಗೊತ್ತಿಲ್ವೇ ?

ಗಂಗಮ್ಮ

ಹಾಗಾದ್ರೆ ತಾಳಿ..... ...ಏನು ಸಾವ್ಕಾರ್ರೇ ದಯ್ಮಾಡ್ಸಿದಿರೀ?

ಸಾಹುಕಾರ

ನಮ್‌ದೂಗೆ ಬಾಕೀ ಹಣ ಕೊಡ್‌ಬೇಕ್. ಕೊಟ್‌ಬಿಡಿ. ಏನ್ ಬಂದದ್ ಅಂತ ಕೇಳ್‌ತಾದಲ್ಲಾ ! ಈ ಹೊತ್ ಕೊಡೋತನ್‌ಕಾ ಬಿಡೋದ್ ಇಲ್ಲಾ. ಹಸಲ್ ಹತ್ ರೂಪಾಯ್, ಬಡ್ಡಿ ಷೇರ್‌ಡಾ ನೂರೈವತ್‌ರಂತೆ ಒಟ್ ನೂರ್ ರೂಪಾಯ್, ಹತ್ ಆಣೆ, ಐದ್ ಕಾಸ್..........ಏನ್ ಷಾಮಣ್ಣೋರೇ, ಹಂಗ್ ದುರ್‌ಗುಟ್‌ಕೊಂಡ್ ನೋಡ್ತೀಯಾ? ಪತ್ರ, ಪತ್ರ ಇದಾದೆ ನೋಡ್. [ಪುಸ್ತಕದಿಂದ ಪತ್ರವನ್ನು ತೆಗೆದು ತೋರಿಸುವನು.]

ಶಾಮಣ್ಣ

ಅವಳ್ಹತ್ರ ಇದೆ ದುಡ್ಡು. ಅವಳ್ನೇ ಕೇಳು.

ಗಂಗಮ್ಮ

[ದುಃಖವನ್ನು ನಟಿಸುತ್ತ] ನಾನು ಹೆಂಗ್ಸು. ನನ್ಹತ್ರ ಎಲ್ಲಿ ಬಂತು ದುಡ್ಡು? ಅವರಿಗೇ, .......... ಉಙ್ಙಂ ........... ಬುದ್ಧಿ ಏನೋ ಆಗಿ

*

ಬಿಟ್ಟದೆ ಇದ್ದಕ್ಕಿದ್ಹಾಗೇ! ಸ್ಥಿಮಿತ ಇಲ್ಲ ........ ಉ್ಹಂ ..................
ಇಷ್ಟೊತ್ತೂ ಆವಾಂತ್ರ ಮಾಡಿದ್ದು ನೋಡ್ಲಿಲ್ವೇ ?

ಸಾಹುಕಾರ

ಏನಮ್ಮ, ಮನೇಲಿ ಯಜಮಾನ್‌ಕೆ ಎಲ್ಲಾ ನಿಮ್‌ದೇ ಇದಾದೆ, ನನಗ್ ಗೊತ್. ನನ್ ಹತ್ರ ದಬಾಯ್‌ಸಿದ್ರೇ ನಾವ್ ಕೋರಟ್‌ಗೆ ಹೋಗ್‌ತೀನ್. ನಿಮ್ ಮನೇ ಬಾಕ್‌ಳಲ್ ಕೂತ್‌ಕೊಂಡ್, ಮರ್ಯಾದೆ ತೆಗದ್ ಹರಾಜ್ ಮಾಡಸ್ತೀನ್. ಹುಷಾರ್ !

ಗಂಗಮ್ಮ

ಅಯ್ಯೋ, ಯಾಕೋ ಸಂಕಟಾ ಆಗುತ್ತೇಂದ್ರೆ, ನಿಂತ್ಕೊಳ್ಳೇಲಾರೆ ...........ಸಂಕಟಾ, ಸಂಕಟಾ ! [ ಎಂದು (ಈ) ಕುರ್ಚಿಯನ್ನು (ಲ) ಬಳಿಗೆ ಎಳೆದುಕೊಂಡು ಅದರ ಮೇಲೆ ಕುಳಿತು ಹಾಗೆ ಹೀಗೆ ಹೊರಳುತ್ತಿರುವಳು. ಸಾಹುಕಾರನು ಅನುಮಾನದಿಂದ ಈಕ್ಷಿಸುವನು. ]

ಶಾಮಣ್ಣ

ರಾಮ ರಾಮಾ ! ಏನು ವಿಪತ್ತು ತಂದ್ಯೋ ! ಯಾವ ಗ್ರಹ ಚಾರವೋ ಇದೂ ? ಮೂರು ದಿನಕ್ಕೆರಡು ಸಲ ಹೀಗಾಗ್ತಿದೆ ಯಲ್ಲಾ ! ............ [ಹೆಂಡತಿಯ ಬಳಿಗೆ ಹೋಗಿ] ಏನಾಗಿದೆ? ಸುಧಾರಿ ಸಿಕೋ ಹೇಗಾದರೂ ಮಾಡಿ.

ಗಂಗಮ್ಮ

ಅ್ಹಯ್ಯೋ ಸಂಕ್ಟಾ .................. ಆಹೊತ್ತಾಗಿತ್ತಲ್ಲಾ ಹಾಗೇ ಆಗಿದೇಂದ್ರೆ,

ಶಾಮಣ್ಣ

ಔಷಧಿ ತಂದು ಕುಡಿಸಲೇ?

ಗಂಗಮ್ಮ

ಬೇಡಾ ಬೇಡಾ, ಔಷಧಿ ತರೋತನಕ ತಡೀಲಾರೆ.

ಶಾಮಣ್ಣ

ಸಧ್ಯಕ್ಕೆ ಮನೇಲಿರೋ ಹರಳೆಣ್ಣೇ............

ಗಂಗಮ್ಮ

ಬೇಡ...... ಎದೇಲಿ ಉರೀ........ಪಾನಕಾ........ಪಾನಕ ಮಾಡೀ ..........ತಕ್ಕೊಂಡ್ಬಂದೂ ........ಕುಡಿಸೀ.

ಶಾಮಣ್ಣ

[(ಯ) ಬಳಿಗೆ ಬಂದು, ತನ್ನಲ್ಲಿ] ಪಾನಕಾ !! ..........ಒಳ್ಳೇ ಉಪಾಯ ಇದು !........ ಆದೂ ನಾನು ಮಾಡೀ, ತಂದೂ, ಕುಡಿಸಬೇಕಂತೆ ಇವಳಿಗೆ!.. ಪಾನಕ ಕುಡಿಸಿದ್ಮೇಲೆ, ಕೋಸುಂಬ್ರಿ ಮಾಡಿಕೊಂಡ್ಬನ್ನಿ, ಆಲ್ಲಿಂದ ರಸಾಯನ ತಂದು ತಿನ್ನಿಸಿ ಅಂತ ಷುರು ಮಾಡ್ತಾಳಿವಳು !

ಸಾಹುಕಾರ

ಹರೇ ರಾಂ! ಇದೇನ್ ನಿಜವ್ೋ ಸುಳ್ಳೋ ಗೊತ್ತಾಗೋಕಿಲ್ಲಾ ! ಏನ್ ಷೋಮೀ, ಷಾಮಣ್ಣೋರೇ, ನೀವೇನ್ ಹೇಳ್ತಾದೆ?

ಶಾಮಣ್ಣ

ಶರೀರಧರ್ಮ ಯಾರಿಗಾದ್ರೂ ಒಂದೇ ಸಾವ್ಕಾರ್ರೇ, ಭಂಗಾರದಂಥಾ

ಹೆಂಡ್ತೀಗ್ಹಿಗಾಗಿರೋವಾಗಾ.... ಒಂದ್ವೇಳೆ, ಮಸಲ, ನಿಮ್ಮನೇಲೇ ಹೀಗಾಗಿದ್ರೆ, ಆಗ ನಿಂಮನಸ್ಸಿನ ಸ್ಥಿತಿ .. ....

## ಸಾಹುಕಾರ

ಆ ಹರಕೆ ಎಲ್ಲಾ ಇರಲಿ ಷಾಮಣ್ಣಾ, ಆ ಯಮ್ಮನ ಮಾತ್ ನನ್ಗೆ ಬೇಡ. ದುಡ್ ತಕೋವಾಗ ಇದ್ ದರದ್ ಕೊಡೋವಾಗ ಇರಬೇಕ್. ನೀವೇನ್ ಗಂಡಸ್ ಜಾತಿ ಅಲ್ಲಾ ? [ ಎಂದು ಶಾಮಣ್ಣನ ಎಡಮುಂಗೈ ಹಿಡಿದುಕೊಳ್ಳುವನು. ಶಾಮಣ್ಣನು, ಕೈ ಮುರಿದೇ ಹೋಯಿತೋ ಎಂಬಂತೆ, ಕೊಸರುವನು. ಸಾಹುಕಾರನು ಗಾಬರಿಯಿಂದ ದೂರ ಸರಿಯು ವನು (ರ). ]

## ಶಾಮಣ್ಣ

[ (ಯ) ಎಂಬಲ್ಲಿ ನಿಂತು, ನೋವನ್ನು ನಟಿಸುತ್ತ ] ಮುರಿಧಾಕಿ ಬಿಟ್ಯಲ್ಲಯ್ಯಾ ಕೈನಾ ! ........ಅಹಹಹ..... .... ಸಾಲಾ ಕೊಟ್ಟಾಕ್ಷಣ ಹೀಗೇ ನಯ್ಯ ಮಾಡೋದೂ ? ... .... ..

[ ಶಾಮಣ್ಣನು ಕೈ ಕೊಡವುತ್ತ ಒಡಿಯಾಡುವನು. ಗಂಗಮ್ಮ ಸಂಕಟ ವನ್ನು ನಟಿಸುತ್ತ ಹೊರಳುವಳು. ]

## ಸಾಹುಕಾರ

[ ತನ್ನಲ್ಲಿ ] ಬಾಪುರೇ ! ನನ್ ಬಾಕೀ ವಸೂಲಿ ಅನುಭವದ ಇಪ್ಪತ್ ವರ್ಷದಲ್ ಇಂಥಾದ್ ನಾನೆಲ್ಲೂ ಕಾಣೆ !......... [ ಅವರ ಕಡೆ ನೋಡುವನು. ಅವರ ಕೂಗಾಟ ಹೆಚ್ಚುವುದು ] ........ ತಿರಿಗೀ ಸಾಯಂ ಕಾಲ ನಾಲಕ್ ಬಡಾ ಇಸಂಗಳನ್ನ ಕರಕೊಂಡ್ ಬರ್ತೀನಿ. ನಿಮ್ ಇಬ್ಬರ ಪೈಕಿ ಒಬ್ಬರ್ ಹತ್ರ ದುಡ್ಡು ಇದಾದೆ. ಸಾಯಂಕಾಲ ಕೊಡದೇ ಹೋದ್ರೇ ನಿಮ್ ಗತಿ ನಾಯಿಗೂ ಬೇಡ...........ಎಂಥಾ ಠಕ್ ಜಾತಿ ಇಸಂ ಇವರು ! ...........[ ಮಾತು ಮಾತಿಗೂ ನಿಲ್ಲಿಸಿ, ಅವರ

ಕಡೆ ನೋಡುವನು. ಹಾಗೆ ನೋಡಿದಾಗ ಮಾತ್ರ ಅವರ ಕೂಗಾಟ ಹೆಚ್ಚು ವುದು ]..........ಇರಲಿ, ಇವ್ರಿಗೆ ನಾನೇ ಗುರು. ವಸೂಲ್ ಮಾಡದೇ ಇದ್ರೆ ನನ್ ಹೆಸರ್ ಕಮಾನ್ ಅಲ್ಲ.

[ ನಿರ್ಗಮ (ಅ) : ಸಾಹುಕಾರ ]

ಶಾಮಣ್ಣ

[ (ಅ) ಬಾಗಿಲಲ್ಲಿ ನಿಂತು ಸಾಹುಕಾರನು ಹೋದಕಡೆ ಚನ್ನಾಗಿ ನೋಡಿ, ಹೆಂಡ ತಿಯ ಬಳಿಗೆ ಬರುವನು ] ಅಲ್ಲಾ, ..... .....

ಗಂಗಮ್ಮ

[ ಇನ್ನೂ ಹೊರಳುತ್ತಲೇ ]ಸಂಕಟಾ, ಸಂಕಟಾ,...........

ಶಾಮಣ್ಣ

ಸಂಕಟ? ........ ಯಾರನ್ನೋಡಿ ಸಂಕಟಾ? ........ ಸಾಕ್ಮಾಡೇ, ಸಾಕ್ಮಾಡೂ. ಅವತಾರ ನೋಡ್ಲಾರೆ. ಹೊರಟ್ಹೋದ ಅವನು.

ಗಂಗಮ್ಮ

[ ನಗುತ್ತ ಎದ್ದು ] ಹೋದ್ನೆ? ಹೋಗ್ಲಿ ಬಿಡಿ.

ಶಾಮಣ್ಣ

ಈಗ್ಹೋದ್ರೇ ತಾನೇ ಏನು? ಬರ್ತಾನೆ ಮತ್ತೆ ಸಾಯಂಕಾಲ.

ಗಂಗಮ್ಮ

[ (ಯ) ಎಂಬಲ್ಲಿ ನಿಂತು ] ಸಾಯಂಕಾಲದವರಿಗೆ ನೀವೂ ಎಲ್ಲಾದ್ರೂ

ಹೋಗೋದಾದ್ರೆ ಹೋಗಿ. ಇಲ್ಲಾ, ನಿರಾತಂಕವಾಗಿ ಜಗಳಾಡೋಣ ಅನ್ನೋದಾದ್ರೆ, ಅದಕ್ಕೂ ಸಿದ್ಧ. ನಿಮಗೂ ರಜ ಇದೆ.

**ಶಾಮಣ್ಣ**

[ (ಕ) ಕುರ್ಚಿಯಲ್ಲಿ ಕುಳಿತು ] ನನಗೆ ಉಸಿರೇ ಇಲ್ಲ—ಹೊರಕ್ಹೋಗೋದಕ್ಕೂ ಉಸಿರಿಲ್ಲ, ಜಗಳಾಡೋದಕ್ಕೂ ಉಸಿರಿಲ್ಲ. ಬೆಳಗಿನಿಂದ ಜಗಳಾಡೀ ಆಡೀ ಸಾಕಾಗ್ಹೋಗಿದೆ. ಈ ಹೊತ್ತು ತಿಂಡಿ ಕಾಫೀ ಕೂಡ ಇಲ್ಲ. ಸ್ವಲ್ಪ ಕಾಫೀಗಾದ್ರೂ ಇಡು ಮೊದ್ಲು.

**ಗಂಗಮ್ಮ**

ಹುಂ; ಮೊದ್ಲು ಕಾಫೀ ಮಾಡಿ ಕುಡಿಸೀ, ಜಗಳಕ್ ಹುಮ್ಮಸ್ ಬರೋ ಹಾಗೆ ಬೇರೇ ಮಾಡಬೇಕೇನೋ! ಕಾಫಿ ಇಲ್ದೇನೇ ಹೊಡೆಯೋಕ್ಬಂದಿದ್ರೀ! ಇನ್ನು ಕಾಫಿ ಕೊಟ್ರೆ ಕಡಿಯೋದಕ್ಕೇ ಬರ್ತೀರಿ! ಪರವಾ ಇಲ್ಲ, ಕಾಫಿ ಬೇಡ ಏನೂ ಬೇಡ; ಹಾಗೇ ಜಗಳಾಡಿ.

**ಶಾಮಣ್ಣ**

ಇಗೋ ನೋಡೂ............ಸುಮ್ಮನೇ ರೇಗಿಸಬೇಡಾ......ಎದ್ದರೆ ಒಳ್ಳೇವನಲ್ಲಾ............

**ಗಂಗಮ್ಮ**

ಏನೂ? ಎದ್ದರೆ ಒಳ್ಳೇವ್ರಲ್ವೆ? ಹಾಗಾದ್ರೆ ಸುಮ್ಮನೆ ಒಂದು ಮೂಲೇಲಿ ಕೂತಿರಿ. ಏಳೋದ್ಯಾಕೆ? ಎದ್ದು ಕೆಟ್ಟೋರಾಗೋದ್ಯಾಕೆ?

**ಶಾಮಣ್ಣ**

ಊಹೂಂ. [ಎಂದು ಹೆಂಡತಿಯ ಕಡೆ ತೀಕ್ಷ್ಣವಾಗಿ ನೋಡುತ್ತಿರುವನು.]

## [ ಪ್ರವೇಶ (ಅ) : ಗುಂಡೂರಾಯ ]

### ಗುಂಡೂರಾಯ

[ ಒಂದು ಹೆಜ್ಜೆ ಇಟ್ಟು, ದಂಪತಿಗಳನ್ನು ನೋಡಿ, ತನ್ನಲ್ಲಿ ] ಓಹೋ ! . . .
[ ಎಂದು ಬಾಗಿಲಲ್ಲೇ ತಟಸ್ಥನಾಗಿ ಆಲಿಸುವನು. ಅವನ ಆಗಮನ ಇವರಿಗೆ ಗೊತ್ತಿಲ್ಲ.]

### ಶಾಮಣ್ಣ

[ ಹೆಂಡತಿಯ ಬಳಿ ಬಂದು ] .... . ಹಾಗಾದ್ರೇ, .. ..... ಮೂರು ಹೊತ್ತೂ ಮೂಲೇಲಿ ಕೂತಿರೋವ್ರೆಲ್ಲಾ ಒಳ್ಳೇವರೇ ಅನ್ನು.

### ಗಂಗಮ್ಮ

[ ಕೆಣಕಿದ ಸಿಂಹಿಯಂತೆ ] ಏನಂದ್ರೀ? .... . [ ಶಾಮಣ್ಣ ಹೆದರಿ ಒಂದು ಹೆಜ್ಜೆ ಹಿಂದಕ್ಕಿಡುವನು. ಗುಂಡೂರಾಯನೂ ಬೆಚ್ಚಿ, ಬಾಗಿಲಲ್ಲಿ ಅರೆಮರೆಯಾಗಿ ನಿಲ್ಲುವನು ] ನಮ್ಮಣ್ಣಸಿಗೆ ಕಾಲು ಹೋಗಿರೋದನ್ನ ತಾನೇ ನೀವು ಹಂಗಿಸ್ತಾ ಇರೋದೂ? ಆಂ? ನಮ್ಮಣ್ಣನೂ ಅಂತಾನೆ ನಿಮ್ಮನ್ನ— ' ಮೂರು ಮಾವಿನಕಾಯಿಯುದ್ದದ ಗುಮಾಸ್ತೆ ' ಅಂತ. .......... ಇನ್ನೊಂದ್ಸಲ ನನ್ನ ತವರುಮನೆ ಸುದ್ದಿ ಎತ್ತಿ ನೋಡಿ, ಹ್ಯಾಗಿರುತ್ತೋ.

### ಗುಂಡೂರಾಯ

[ತಲೆದೂಗಿ] ಸರಿ. [ಎಂದು ಮರೆಯಾಗುವನು]

## [ ನಿರ್ಗಮ (ಅ) : ಗುಂಡೂರಾಯ]

### ಶಾಮಣ್ಣ

ನಾ ಹೇಳೋದು ಕೇಳು ಇಲ್ಲಿ...........

**(ತೆರೆಯಲ್ಲಿ) ಗುಂಡೂರಾಯ**

ಶಾಮಣ್ಣೋರೇ, ಮನೇಲಿದ್ದೀರಾ ?

**ಶಾಮಣ್ಣ**

[ಅವಸರದಿಂದ] ಓಹೋ, ಗುಂಡೂರಾಯ ಬಂದಿರೋಹಾಗಿದೆ. [ಎಂದು ಅವನನ್ನು ಕರೆತರಲು ಹೋಗುವನು.]

**[ ನಿರ್ಗಮ (ಅ) : ಶಾಮಣ್ಣ ]**

**ಗಂಗಮ್ಮ**

[ತನ್ನಲ್ಲಿ] ಇವನೊಬ್ಬ ಬಂದ, ಶನಿ—ವ್ಯಾಜ್ಯಕ್ಕೆ ಅಡ್ಡವಾಗಿ. ಮನೇಲಿ ಜಗಳ ಹೂಡಿದೇಂದ್ರೆ ಸುಸೂತ್ರವಾಗಿ ನಡಕೊಂಡ್ಹೋಗುತ್ತೇಂದ್ರೆ ಏನನ್ನೋ ಮಾತು? ಒಂದು ಸಾವಿರ ವಿಘ್ನಗಳು, ಒಂದು ಸಾವಿರ..... .....ಇನ್ನೇನ್ಗತಿ! ಇವನು ಪ್ರಾಣ ಸ್ನೇಹಿತ. ಇಬ್ರಿಗೂ ಒಂದೇ ಕುತ್ತಿಗೇಲ್ಹೋಗುತ್ತೆ ಪ್ರಾಣ—'ಒಡಲೆರಡಸುವೊಂದೆನೆ'! ಇನ್ನು ಎಲ್ಲಾ ವರದಿ ಒಪ್ಪಿಸಿ, ನಾನು ಗಟ್ಟಿಗಿತ್ತೀಂತ ಹೇಳಿ ಬಿಡ್ತಾರೋ ಏನೋ!

**[ಪ್ರವೇಶ (ಅ) : ಶಾಮಣ್ಣ ಮತ್ತು ಗುಂಡೂರಾಯ]**

**ಶಾಮಣ್ಣ**

ಬಾರಯ್ಯ ಗುಂಡೂರಾಯ, ನೀ ಬಂದದ್ದೂ ಒಳ್ಳೇದೇ ಆಯ್ತು. ಕೂತುಕೋ. [ (ಕ) ಕುರ್ಚಿಯಲ್ಲಿ ಕುಳಿತುಕೊಳ್ಳುವನು.]

**ಗುಂಡೂರಾಯ**

[ (ಚ) ಕುರ್ಚಿಯಲ್ಲಿ ಕುಳಿತು] ಏನಪ್ಪಾ ಅಂಥಾ ಸಮಯ ?

### ಗಂಗಮ್ಮ

[ಸರ್ರನೆ] ಹೊತ್ತ್ಲೇ ಹೋಗೋದಿಲ್ಲಾಂತ ಪೇಚಾಡಿಕೋತಾ ಇದ್ದಿ ರಲ್ಲಾ, ಆಷ್ಟೊತ್ತಿಗೆ ಸರಿಯಾಗಿ ಬಂದರು ಸಧ್ಯ! ಈ ಭಾನುವಾರ ಗಳು ಬಂದರೇ, ನಮ್ಮೋರಿಗೆ, ಸರಿಯಾದಸ್ನೇಹಿತರಿಲ್ಲದ್ದು, ಹೊತ್ತು ಕಳೆಯೋದೇ ಕಷ್ಟ ಗುಂಡೂರಾಯ್ರೇ.

### ಶಾಮಣ್ಣ

[ಯಾಜಮಾನ್ಯದಿಂದ] ಅಲ್ಲಾ, ..........ಸ್ವಲ್ಪ ಕಾಫೀಗಿಟ್ರಿ..........

### ಗಂಗಮ್ಮ

ಒಂದು ಕ್ಷಣದಲ್ಲಿ ಮಾಡಿ ತರ್ತೀನಿ. ಗುಂಡೂರಾಯರು ಬರೋದೇ ಅಪರೂಪ ನಮ್ಮನೆಗೆ [ಎಂದು ಒಳಕ್ಕೆ ಹೋಗುತ್ತ ಒಮ್ಮೆ ಗಂಡನ ಕಡೆಗೆ ಸಿಡುಕಿನಿಂದ ನೋಡಿ ಹೋಗುವಳು.]

[ ನಿರ್ಗಮ (ಇ) : ಗಂಗಮ್ಮ ]

### ಶಾಮಣ್ಣ

[ ಎದ್ದು (ಲ) ಮತ್ತು (ಯ) ಗಳ ನಡುವೆ ಶತಪಥ ಹಾಕುತ್ತ ] ನೋಡು ಗುಂಡೂರಾಯ, ಈ ಭಾನುವಾರಗಳು ಬಂದಾವೇ, ಸಧ್ಯ ಆಫೀಸಿ ನಿಂದ ವಿರಾಮ ದೊರೆತೀತೇ ಅಂತ ನಾವು ನಿರೀಕ್ಷಿಸಿಕೊಂಡಿರ್ತೀವೆ. ಆದರೆ..........

### ಗುಂಡೂರಾಯ

ಆದರೆ ಅವು ಬಂದರೆ ಭಾಳಾ ಕಷ್ಟ.

ಶಾಮಣ್ಣ

[ಕ್ಷಣಕಾಲ ಅನುಮಾನಿಸಿ ಮತ್ತೆ] ಆಂ ನೋಡು, ಕಷ್ಟ !............ಹೊತ್ತೇ ಹೋಗೋದಿಲ್ಲ............[ಗುಂಡೂರಾಯನು ಶಾಮಣ್ಣನನ್ನು ಓರೆನೋಟದಲ್ಲಿ ನೋಡುವನು] ಆದರೆ ಹೊತ್ತು ಹೋಗದೇ ಇದ್ದರೂ ಚಿಂತೆ ಇಲ್ಲ, ಆ ಗುಮಾಸ್ತೆ ಕೆಲಸ ಸಾಕಪ್ಪ.... ....ದೊಡ್ಡ ಸಾಹೇಬರು ಬರೋ ಗಲಾಟೇಲಿ ನಮ್ಮ ಸಾಹೇಬರು ನಮ್ಮ ಗೋಳನ್ನೇ ಹೊಯ್ಕೊಂಡು ಬಿಡ್ತಾರೆ........[ಗುಂಡೂರಾಯ ಸುಮ್ಮನಿರುವನು.]........ ನಿನ್ನ ಫೈಲು ಗಳೆಲ್ಲಾ ಮುಗಿದವೆ? .... ......[ಗುಂಡೂರಾಯ ಯೋಚನೆಯನ್ನು ನಟಿಸುವನು.]........ಯಾಕೆ ಸುಮ್ಮನೇ ಕೂತಿದ್ದೀ ?

ಗುಂಡೂರಾಯ

ಆಂ? ಏನೂ ಇಲ್ಲ. ಬಾ, ಕೂತುಕೋ ಬಾ, ಹೇಳ್ತೇನೆ. [ಶಾಮಣ್ಣ ಕುಳಿತುಕೊಳ್ಳುವನು]........ನಿನ್ನ ಎತ್ತರ ಎಷ್ಟು ?

ಶಾಮಣ್ಣ

[ಪಕ್ಕಕ್ಕೆ ತಿರುಗಿ, ತನ್ನಲ್ಲಿ] ಇವನಿಗೆ ಪತ್ತೆ ಆಗಿದ್ಯೋ ಏನೋ ! [ಗೂಡೂರಾಯನಿಗೆ] ನನ್ನೆತ್ತರಾನೇ ? ............ ಐದೂ ಚಿಲ್ಲರಡಿ ಇದ್ದೀತು. ಯಾಕೆ ?

ಗುಂಡೂರಾಯ

ಯಾಕೂ ಇಲ್ಲ. ನಾನೂ............ಒಂದು ಲೆಕ್ಕಾಚಾರ ಹಾಕ್ತಾ ಇದ್ದೆ.

ಶಾಮಣ್ಣ

ಏನು ಲೆಕ್ಕ ಅಂಥಾದ್ದೂ ?

## ಗುಂಡೂರಾಯ

ಮೂರು ಮಾವಿನಕಾಯಿ ಉದ್ದ ಐದೂಚಿಲ್ಲರಡಿ ಆದರೆ, ಒಂದು ಮಾವಿನಕಾಯಿ ಉದ್ದ ಎಷ್ಟೊ ಚಿಲ್ಲರಡಿ ಆಯ್ತೂಂತ.

## ಶಾಮಣ್ಣ

[ಪೆಚ್ಚಾಗಿ] ಏನಪ್ಪ, ನಿನ್ನ ಮುಂದೇನು ಮುಚ್ಚುಮರೆ? ನಿನಗ್ಗೊತ್ತೇ ಇದೆ ನಮ್ಮನೇ ಸಮಾಚಾರ.

## ಗುಂಡೂರಾಯ

ಮತ್ತೆ ನನಗೇ ಮಂಕುಬೂದಿ ಎರಚೋ ಪ್ರಯತ್ನ ಮಾಡ್ತಾ ಇದ್ದೀಯಲ್ಲಾ ! ನೀನೂ ಘಾಟಿ, ನಾನೂ ಘಾಟಿ ! ಇಬ್ಬರು ಘಾಟಿ ಗಳು ಸೇರಿದರೆ,........

## ಶಾಮಣ್ಣ

ನಿಭಾಯಿಸೋದು ಕಷ್ಟ !

## [ ಪ್ರವೇಶ (ಇ) : ಗಂಗಮ್ಮ ]

[ಎರಡು ಚಿಕ್ಕ ತಟ್ಟೆಗಳಲ್ಲಿ ತಿಂಡಿ ಸಮೇತ ಗಂಗಮ್ಮ ಪ್ರವೇಶಿಸುವಳು.]

## ಗಂಗಮ್ಮ

[ತಟ್ಟೆಗಳನ್ನು ಮೇಜಿನ ಮೇಲಿಟ್ಟು] ಕಾಫೀ ಆಗ್ತಾ ಬಂತು. ಆದುವರೆಗೆ ಇದನ್ನ ತಕೊಳ್ಳಿ.

## ಗುಂಡೂರಾಯ

ಓಹೋ! ಏನು ಶಾಮಣ್ಣಾ, ಭಾಳಾ ಉಪಚಾರ ಮಾಡಸ್ತಾ ಇದ್ದೀ. ನಿನಗೇನು ಕಡಮೆ? ಮೊನ್ನೆ ಯಾವುದೋ ಹಣ ಬರ ಬೇಕಾದ್ದು ಬಂತಲ್ವೆ ನಿನಗೆ? [ಶಾಮಣ್ಣ, ಗುಂಡೂರಾಯ ಇಬ್ಬರೂ ತಿಂಡಿ ತೆಗೆದುಕೊಳ್ಳುವರು.]

ಗಂಗಮ್ಮ

[ಗಂಡನ ಬಳಿ ನಿಂತು] ಏನೋ ಒಂದ್ನಾಲಕ್ಕಾಸು ಬಂತು ಕಾಣ್ರಪ್ಪ. ಆದರೆ ಯಾವ ಮೂಲೆಗೆ ಅದು? ತೊಂಬತ್ತೆಂಟು ಸಾಲ, ಆ ಹಣ ಬಳಸದ್ದಾಗೆ ಸಾವ್ಕಾರನ ಸಾಲಕ್ಕಟ್ಟಿಬಿಡೀಂತ ನಾನು ಹೇಳಿದೆ. [ಶಾಮಣ್ಣ ಗಂಗಮ್ಮನ ಮುಖ ನೋಡುವನು. ಆಕೆ ಅವನ ಭುಜವನ್ನು ಚುಚ್ಚುವಳು.] ಆದರೆ ನಮ್ಮೋರು 'ಸಾಲ ಇದ್ದೇ ಇದೆ. ಅದು ಎಂದಿಗೆ ತೀರೋದು? ಈ ನೂರು ರೂಪಾಯಿ ತೀರಿದಾಕ್ಷಣ ಒಂದು ಗುಲಗಂಜಿ ತೂಕ ಭಾರ ಕಡಮೆ ಆಗೋದಿಲ್ಲ. ಆದ್ದರಿಂದ ಒಂದು ಸೀರೇನೋ ಒಡವೇನೋ ತಕೊಳ್ಳೋಣ' ಅಂತಾರೆ.

ಶಾಮಣ್ಣ

[ಕಣ್ಣರಳಿಸಿಕೊಂಡು (ಯ) ಎಂಬಲ್ಲಿಗೆ ಬಂದು, ತನ್ನಲ್ಲಿ] ಎಲಾ ಇವಳ ಮನೆ ಹಾಳಾಗಾ! ತಿರುಗಿಸಿಬಿಟ್ಟಲ್ಲ ಮಾತು!

ಗುಂಡೂರಾಯ

ನ್ಯಾಯವಾದ ಮಾತು.

ಶಾಮಣ್ಣ

ಯಾವುದು?

ಗಂಗಮ್ಮ

ಯಾವುದು?

ಗುಂಡೂರಾಯ

ನಿಮ್ಮಿಬ್ಬರ ಅಭಿಪ್ರಾಯಗಳೂ ನ್ಯಾಯವೇ. ಒಬ್ಬೊಬ್ಬರು ಒಂದೊಂದು ದೃಷ್ಟಿಕೋನದಿಂದ ಆಲೋಚಿಸಿದ್ದೀರಿ. ಸಾಲ ತೀರಿ ಸೋದು ನ್ಯಾಯವೇ ಸರಿ! [ಗಂಗಮ್ಮ ಪೆಚ್ಚಾಗುವಳು. ಶಾಮಣ್ಣ ಬಂದು ಕುಳಿತುಕೊಳ್ಳುವನು.] . . . . ಆದರೆ 'ಅಲ್ಪ ಸ್ವಲ್ಪ ತೀರಿಸಿದರೆ

ಕಾನೆ ಏನಾದ್ರಾಗಾಯ್ತು ? ಭಾರ ತಗ್ಗೋದಿಲ್ಲ. ಒಡವೆ ಸೀರೇ ನಾದ್ರೂ ತಂದು ಸುಖಪಡೋಣ' ಅನ್ನೋದೂ ನ್ಯಾಯವಾದ ಮಾತೇ ! [ಶಾಮಣ್ಣ ಪೆಚ್ಚಾಗುವನು.]

ಗಂಗಮ್ಮ

ನನಗಂತೂ ಏನೂ ತೋಚದ್ದಾಗಾಗಿಬಿಟ್ಟಿದೆ.

ಗುಂಡೂರಾಯ

ಅಲ್ವೇಮ್ಮಾ ಪಾಪ !

ಶಾಮಣ್ಣ

[ಧೋರಣೆಯಿಂದ] ಕೈ ಒರಸಿಕೊಳ್ಳೋದಕ್ಕೆ ಆ ಟವಲು ಕೊಡು ಇಲ್ಲಿ.

ಗಂಗಮ್ಮ

[ನಿಲುವಿನ ಮೇಲಿರುವ ಟವಲನ್ನು ತಂದುಕೊಟ್ಟು, ಮೆಲ್ಲನೆ] ಎದ್ದು ತಕೊಳ್ಳೋದಕ್ಕೇನಾಗಿತ್ತು ಧಾಡಿ ?

ಶಾಮಣ್ಣ

[ಕೈ ಒರಸಿಕೊಂಡು, ಕುರ್ಚಿಯನ್ನು ಗುಂಡೂರಾಯನ ಸಮೀಪಕ್ಕೆಳೆದು ಕೊಂಡು ಕುಳಿತು] ಹುಂ, ಕಾಫೀ ಆಗಿದ್ಯೇನೋ ನೋಡು, ಜಾಗ್ರತೆ.

ಗಂಗಮ್ಮ

[ಶಾಮಣ್ಣನ ಮುಖವನ್ನು ನೋಡಿ, ಒಳಕ್ಕೆ ಹೋಗುತ್ತ, ತನ್ನಲ್ಲಿ] ಸ್ನೇಹಿತನ ಆಸರೆ ಸಿಕ್ಕಿತೂಂತ ಏನ್ ಧೋರಣೇ ! .......

[ನಿರ್ಗಮ (ಇ) : ಗಂಗಮ್ಮ]

ಶಾಮಣ್ಣ

ಚಾಂಡಾಲೀ! ದಬಾಯಿಸಿಬಿಟ್ಳಲ್ಲ! ಅಲ್ಲಾ ಗುಂಡೂರಾವ್, ನಿನ್ನೆದುರಿಗೆ ಎಂಥಾ ಮಾಯ ಹೂಡಿದಾಳೆ ನೋಡಿದ್ಯಾ?........ 'ಸಾಲ್ದೋನ ತಗಾದೆ ಇದೆ, ಹಣ ಸಾಲಕ್ಕಟ್ಬೋಣ' ಅಂತ ಹೇಳಿದೋನು ನಾನು! ಒಡವೆ ಸೀರೇಗೆ ಹಠ ಮಾಡಿದೋಳು ಅವಳು! 'ನಿಮಗೇನು ಕೇಡು, ನಿಮ್ಮ ತಲೇಲಿ ಬುದ್ಧಿ ಇಲ್ವೆ' ಅಂತ ಬಹುವಚನದಲ್ಲೇ ಬಯ್ದ್ಲು, ಬೆಳಗಿನಿಂದ ಜಗಳಾಡೀ, ಈಗ ನೋಡು ಅವಳ ಹೊಡಶಾನ!

ಗುಂಡೂರಾಯ

ಸಂಸಾರ ಅಂದ್ಮೇಲೆ ಹೀಗೇಪ್ಪಾ. ಎಲ್ಲಾರ ಮನೇ ದೋಸೇನೂ ತೂತೇ! ........ ನಮ್ಮನೇಲೂ ಹೀಗೇನೇ! ಏನ್ಮಾಡೋದು? ಸುಧಾರಿಸಿಕೊಂಡ್ಹೋಗ್ಬೇಕು.

ಶಾಮಣ್ಣ

ಎಲ್ರ ಮನೇಲೂ ದೋಸೇ ತೂತಾದ್ರೇ, ನಮ್ಮನೇಲಿ ಕಾವಲೀನೇ ತೂತಾಗಿದೆಯಲ್ಲ! ........ ಈಗ ನನ್ನ ಗತಿ ಏನು ಹೇಳು. ಆ ಸಾವ್ಕಾರ ಈಗ ಬಂದಿದ್ದ. ಹೇಗೋ ಕಳಿಸಿಬಿಟ್ಟೆ. ಆದರೆ ಮತ್ತೆ ಬರ್ತಾನೆ ಸಾಯಂಕಾಲ!

ಗುಂಡೂರಾಯ

ಈಗ ಅವನ್ನ ಹೇಗೆ ಕಳಿಸಿದೆ?

ಶಾಮಣ್ಣ

ಹೇಗೆ ಅಂದ್ರೆ, ಹೇಳ್ತೀನಿ ಕೇಳು........ಉಹುಂ, ಹೇಗೋ ಕಳಿಸಿದೇಂತ ಇಟ್ಕೋ.

ಗುಂಡೂರಾಯ

ಹೇಳು ಹೇಳು, ಕೇಳೋಣ.

ಶಾಮಣ್ಣ

........ಉಹುಂ, ಉಹುಂ.

ಗುಂಡೂರಾಯ

ಹಾಗೋ?........ಹೋಗ್ಲಿ, ಈಗ ಯಾವ ರೀತಿ ಕಳಿಸಿದ್ಯೋ, ಅದೇ ರೀತಿ ಸಾಯಂಕಾಲಾನೂ ಕಳಿಸಿಬಿಡು.

ಶಾಮಣ್ಣ

ಹಾಗೆ ಸಾಧ್ಯವೇ ಗುಂಡೂರಾವ್? ತಮಾಷೆ ಮಾಡ್ತೀಯಲ್ಲಾ.

ಗುಂಡೂರಾಯ

ಹಾಗಾದ್ರೆ ಅವನಿಗೆ ದುಡ್ಡು ಕೊಟ್ಬಿಡು.

ಶಾಮಣ್ಣ

ದುಡ್ಡು ಅವಳ್ಹತ್ರ ಇದೆ. ಅದು ಬಂದ ದಿನವೇ ಅದನ್ನ ಉಪಾಯ ದಿಂದ ವಶಪಡಿಸಿಕೊಂಡ್ಬಿಟ್ಳು. ಈಗ ಕಿಬ್ಬಿಬ್ಬಿ ಅಂದ್ರೂ ಕೊಡ್ಳು.

ಗುಂಡೂರಾಯ

'ಕಿಬ್ಬಿಬ್ಬಿ' ಅಂದ್ರೆ ಯಾಕ್ಕೊಡ್ತಾರೆ ಹೇಳು.

ಶಾಮಣ್ಣ

ಅದೇ ಗೋಳೇ ನಾ ಹೇಳ್ತಾ ಇರೋದೀಗಾ........ಆ ಹೊತ್ನಿಂದ ಜಗಳ, ಮನೇಲಿ ಒಬ್ರೊಬ್ಬರಿಗೆ ಮಾತಿಲ್ಲ. ಆಗಾಗ ಸಿಟ್ಟು ಬಂದು

ಜಗಳಾಡೋದು, ಮತ್ತೆ ಮೌನವ್ರತ — ಹೀಗೆ ಎಷ್ಟೋ ದಿವಸ ಆಗೀ ಆಗೀ, ನನಗೆ ಸಂಸಾರದ್ಮೇಲೆ ಜುಗುಪ್ಸೆ ಹುಟ್ಹೋಗಿದೆ........ ಗುಂಡೂರಾವ್, ಸನ್ಯಾಸ ತಕೊಳ್ಳೋದೊಂದು ಬಾಕಿ ಇದೆ ನೋಡು............ ಇದಕ್ಕೇನಾದ್ರೂ ಉಪಾಯ ಹೇಳಬಾರದೇ ನೀನಾದ್ರೂ ?

ಗುಂಡೂರಾಯ

ಯಾವುದಕ್ಕೆ ? ಸನ್ಯಾಸ ತಕೊಳ್ಳೋದಕ್ಕೆ ಉಪಾಯಾನೇ ? ಅದಕ್ಕೇನಂತೆ? ಈ ವೂರಿಗೆ ಬಂದಿದಾನಲ್ಲ, ಯತಿ — ಅವನ್ನ ಕೇಳಿದರಾಯ್ತು.

ಶಾಮಣ್ಣ

ನಿನಗೇ, ಚಲ್ಲಾಟವಾಗಿದೆ; ನನಗೇ, ಪ್ರಾಣವೇ ಹೋಗುತ್ತೆ. ಮನೇ ಕಲಹ ಸರಿಹೋಗಬೇಕು, .... ... ಹಣ ಅವಳಿಂದ ಈಚೆಗೆ ಬರಬೇಕು—ಇದಕ್ಕುಪಾಯ ಹೇಳೂಂತ ನಾ ಕೇಳಿದ್ದು.

ಗುಂಡೂರಾಯ

[ಮುಂದೆ ಬಂದು (ರ), ಬೆರಳೆಣಿಸುತ್ತ] 'ಮನೇ ಕಲಹ ಸರಿಹೋಗಬೇಕು, ........ ಹಣ ಅವಳಿಂದ ಈಚೆಗೆ ಬರಬೇಕು"—- ಇದಕ್ಕೆ ಉಪಾಯ !........ಸ್ವಲ್ಪ ಹೊತ್ತು ಸುಮ್ಮನಿರು, ಹೇಳ್ತೇನೆ........ ಉಪಾಯ ತಲೇ ಒಳಕ್ಕೆ ತೂರಿಕೋತಾ ಇದೆ........ [ಮೆಲ್ಲನೆ ಸಿಳ್ಳು ಹಾಕುತ್ತ ಯೋಚಿಸಿ] ........ಆಂ, ನೋಡು, ಹೊಳೀತು, ಹೊಳದೇ ಬಿಡ್ತು !

### ಶಾಮಣ್ಣ

[ಎದ್ದು ಬಂದು] ಕೂಗಾಡಬೇಡ, ಮೆಲ್ಲಗೆ ಹೇಳು, ಒಳಕ್ಕೇನಾದ್ರೂ ಕೇಳಿಸಿದರೆ ನಮ್ಮಿಬ್ಬರ ಅವಸ್ಥೇನೂ ಮುಗೀತು.

### ಗುಂಡೂರಾಯ

ಹೌದು ಹೌದು. ಮೆಲ್ಲಗೇ ಹೇಳ್ತೀನೆ........ಈ ವೂರಿಗೆ ಯತಿ ಬಂದಿರೋ ವಿಚಾರ ನಿನ್ನ ಹೆಂಡ್ತೀಗ್ಗೊತ್ತಿದ್ಯೋ?

### ಶಾಮಣ್ಣ

ಗೊತ್ತಿದೆ. ಹ್ಯಾಗೇಂದ್ರೆ, ಅವಳೇ ಒಂದಿನ ಕೇಳಿದ್ಲು ನನ್ನ: ಆ ಯತೀಗೆ ಬಿಕ್ಕಲು ಹಿಡಿದಿದೆಯಂತೆ, ನಿಜವೇ? ಅಂತ. ಆದ್ರೆ ಯಾವುದೋ ಸುದ್ದಿ ತೆಗೆದುಬಿಟ್ಟ್ಯಲ್ಲ.

### ಗುಂಡೂರಾಯ

ಯಾವುದೋ ಸುದ್ದಿ ಅಲ್ಲ. ಅದೇ ಉಪಾಯ ನೋಡು.

### ಶಾಮಣ್ಣ

ಮೆಲ್ಲಗೆ, ಮೆಲ್ಲಗೆ ಹೇಳು. [ಹತ್ತಿರಕ್ಕೆ ಬರುವನು.]

### ಗುಂಡೂರಾಯ

ನೀನೂ............

### ಶಾಮಣ್ಣ

ಊಂ,............

### ಗುಂಡೂರಾಯ

........ಸನ್ಯಾಸ ತಕೊಂಡ್ಬಿಡು.

*

### ಶಾಮಣ್ಣ

[ಗಾಬರಿಯಿಂದ ಕಣ್ಣರಳಿಸಿ] ನಾನೆ? ........ ಸನ್ಯಾಸಾನೆ? ............ ನಮ್ಮಜ್ಜನ ತಲೆ! ಆಗೋದಿಲ್ಲ, ಸಾಧ್ಯವಿಲ್ಲ. [ದೂರ ಸರಿಯುವನು.]

### ಗುಂಡೂರಾಯ

ನಾ ಹೇಳೋದು ಪೂರ್ತಿ ಕೇಳು ನೀನೂ........ [ಎಂದು ಶಾಮಣ್ಣನ ಕೈ ಹಿಡಿದುಕೊಳ್ಳುವನು.]

### ಶಾಮಣ್ಣ

[ಕೈ ಕೊಸರಿಕೊಂಡು] ಎಲ್ಲೀ ಸುದ್ದಿ ಬಿಡು........ನಂಗಿನ್ನೂ ಮೂವತ್ತೈದು ವರ್ಷ ಕೂಡ ತುಂಬಿಲ್ಲಾ !

### ಗುಂಡೂರಾಯ

ಹಾಗಲ್ಲ, ಬಾ ಇಲ್ಲಿ........ಪೂರ್ತಿ ಕೇಳೋದೊಂದು ಕೇಳು. ಆಮೇಲೆ ನಿನಗೆ ಸರಿತೋರಿದರೆ ಮಾಡು, ಇಲ್ದೇ ಇದ್ರೆ ಬಿಡು. ಕೇಳೋದಕ್ಕೆ ನೀನೇನು ಸವಕೋಬೇಕೂ?

### ಶಾಮಣ್ಣ

ಉಂ, ಅದೇನು ಹೇಳಿಬಿಡು ಪೂರ್ತಿ, ಹಾಗಾದ್ರೆ. [ಹತ್ತಿರ ಬರುವನು.]

### ಗುಂಡೂರಾಯ

ಮತ್ತೇ ಏ........... [ ಶಾಮಣ್ಣನ ಕಿವಿಯಲ್ಲಿ ಪಿಸುಗುಟ್ಟುವನು. ಶಾಮಣ್ಣ ಮಧ್ಯೆಮಧ್ಯೆ 'ಅಂ?....... ಅಂ? ......' ಎಂದು ಕೇಳಿ ತಿಳಿದುಕೊಳ್ಳುವನು.] ಹ್ಯಾಗಿದೆ ಉಪಾಯ?

### ಶಾಮಣ್ಣ

[ಮೆಚ್ಚಿ] ಶಾಭಾಸ್ ! ಆಗಬಹುದು. ನಿಜವಾಗಿ ಸನ್ಯಾಸ ತಕೋ ಅಂದ್ಯೇನೋ ಅಂದುಕೊಂಡಿದ್ದೆ ..... ಹೀಗಾದರಾಗಬಹುದು............ ಪ್ರಚಂಡ ಬುದ್ಧಿ ನಿಂದು ! ಈ ನಿನ್ನ ಬುದ್ಧೀಗೋಸ್ಕರ..........ನಿನ್ನ . .ಏನು ಮಾಡಿದರೂ ತೀರದು !

### ಗುಂಡೂರಾಯ

[ಹುಬ್ಬು ಗಂಟಿಟ್ಟು] ಅಂದರೆ !

### ಶಾಮಣ್ಣ

ಏತಕ್ಕೇರಿಸಿದರೂ ತೀರದು !

### ಗುಂಡೂರಾಯ

[ಅಸಮಾಧಾನದಿಂದ ಹೊರಟುಹೋಗುವವನಂತೆ] ಏನು ಮಾತಯ್ಯ ಇದು ? ಏನೋ ಸ್ನೇಹಿತ, ಕಷ್ಟಕಾಲದಲ್ಲಿ ಸಹಾಯ ಮಾಡೋಣ, a friend in need is a friend indeed ಅನ್ನೋ ಮಾತು ಸಾರ್ಥಕಪಡಿಸೋಣ, ಅಂತ ನಾನು ತಲೆ ಕೆಡಿಸಿ ಕೊಂಡು ಉಪಾಯ ಹೇಳಿದರೆ, ಏನೇನೋ ಅಂತೀಯಲ್ಲಾ ! ನಿನಗೆ ಸಮಾಧಾನ ಇಲ್ದೆ ಇದ್ರೆ ಬಿಡು.

### ಶಾಮಣ್ಣ

ಹಾ ! ಕೋಪಿಸ್ಕೋಬೇಡ. ಕೂತುಕೋ ಬಾ. [ಕೈ ಹಿಡಿದು] 'ನಿನ್ನ ಏತಕ್ಕೇರಿಸಿದರೂ ತೀರದು' ಅಂದ್ರೇ.........ಯಾವ ದೊಡ್ಡ ಅಧಿ ಕಾರಕ್ಕೆ ಬೇಕಾದ್ರೂ ಏರಿಸಬಹುದೂಂತ !

ಗುಂಡೂರಾಯ

ಓಹೋ, ಹಾಗೋ? ಸರಿ, ಸರಿ........[ (ಇ) ಬಾಗಿಲ ಕಡೆ ನೋಡಿ] ಆಗೋ ನಿನ್ನ ಹೆಂಡ್ತಿ ಬಂದ್ರು. ಈಗ ನಾ ಹೇಳೋದಕ್ಕೆಲ್ಲಾ ಊಂ ಅನ್ನು ............ಏನು?

ಶಾಮಣ್ಣ

ಊಂ, [ಇಬ್ಬರೂ ಕುಳಿತುಕೊಳ್ಳುವರು].

[ ಪ್ರವೇಶ (ಇ) : ಗಂಗಮ್ಮ ]

[ಎರಡು ಬಟ್ಟಲು ಕಾಫೀ ಸಮೇತ ಪ್ರವೇಶಿಸಿ, ಕಾಫೀ ಮೇಜಿನ ಮೇಲಿಟ್ಟು, ಸ್ವಲ್ಪ ಪಕ್ಕಕ್ಕೆ ಸರಿದು ನಿಲ್ಲುವಳು.]

ಶಾಮಣ್ಣ

[ಕಾಫೀ ಸವಿಯುತ್ತ] ಗುಂಡೂರಾವ್, ಈ ವೂರಿಗೆ ಯತಿಗಳು ಬಂದಿದಾರಂತಲ್ಲಾ........ ಆವರ ವಿಷ್ಯ ನಿನಗೇನಾದರೂ ಗೊತ್ತೆ?

ಗುಂಡೂರಾಯ

[ಕಾಫೀ ಸವಿಯುತ್ತ] ಓಹೋ, ಅವರು ನನಗೆ ಚನ್ನಾಗೇ ಗೊತ್ತು. ಆವರ ಸಮಾಚಾರ ಭಾಳಾ ದೂರದಲ್ಲಿದೆ. ಹಠಯೋಗದ ಸನ್ಯಾಸಿಗಳು, ಅವರು.

ಗಂಗಮ್ಮ

ಯಾರು? ಆ ಬಿಕ್ಕಲು ಯತೀನೇ?

ಗುಂಡೂರಾಯ

ಊಂ, ಅವರೆ!........ [ಶಾಮಣ್ಣನಿಗೆ ಮೆಲ್ಲನೆ] ಈಗ ಗಫಾ ಬಿಡ್ತೇನೆ, ಸುಮ್ಮನಿರು........[ಗಂಗಮ್ಮನಿಗೆ] ಅವರು ನೋಡೋದಕ್ಕೆ ನನ್ನಾಗೇ

ಇದಾರೆ; ಆದರೆ ಭಾಳಾ ಮಹಾತ್ಮರು ಅವರು!.... .....ಮೊನ್ನೆ ಅವರು ತಿಮ್ಮನಗರಕ್ಹೋಗಿದ್ದಾಗ,..........ಒಬ್ಬ ತಿರುಕ,...........

ಶಾಮಣ್ಣ

ಭಿಕ್ಷೇ ಬೇಡೋನು,.........

ಗುಂಡೂರಾಯ

ಊಂ, ಭಿಕ್ಷೇ ಬೇಡೋನು, ಐಶ್ವರ್ಯ ಬೇಕು ಅಂತ ಪ್ರಾರ್ಥಿಸಿದ, ಯತಿಗಳ್ನ.........

ಗಂಗಮ್ಮ

ಐಶ್ವರ್ಯ ಬೇಕೂಂತ!..........ಆಮೇಲೆ?

ಗುಂಡೂರಾಯ

ಅವನನ್ನೋಡಿ ಯತಿಗಳಿಗೆ ಕರುಣೆ ಹುಟ್ಟಿ, ಅವನ ತಲೇ ಮೇಲೆ ಮಂತ್ರೋದಕ ಪ್ರೋಕ್ಷಿಸಿದರು. ತತ್‌ಕ್ಷಣ ಅವನ ಮನೆ ಭಂಗಾರ ವಾಗ್ಹೋಯ್ತು! [ಗಂಗಮ್ಮ ತಲೆದೂಗುವಳು.]

ಶಾಮಣ್ಣ

ಅಹಹಹ! ಎಂಥಾ ಮಹಾತ್ಮೆ! ಏನು ಕಥೆ! .......... ಮೊನ್ನೆ, ನಮ್ಮ ವೆಂಕೋಬರಾಯರು ನಾಗೂ ಮದುವೆಗೆ ರಂಗಾಪುರಕ್ಹೋಗಿದ್ರಲ್ಲ.

ಗುಂಡೂರಾಯ

ಅದೇ, ಆ ಆಚಾರ್ರ ಬೀದೀ ವೆಂಕೋಬ್ರಾಯ್ರೂ...........

ಶಾಮಣ್ಣ

ಊಂ. ಆ ದಿನ ಯತಿಗಳೂ ಅಲ್ಲಿಗೆ ಸಂಚಾರ ಹೋಗಿದ್ರಂತೆ. ಅಲ್ಲಿ ಒಬ್ಬ ಕಟುಕರೋನು ಅವರ ಬಳಿ ಹೋಗಿ, ಮುಕ್ತಿ ಕೊಡಬೇಕು ಅಂತ ಪ್ರಾರ್ಥಿಸಿದನಂತೆ !

ಗುಂಡೂರಾಯ

ಕಟುಕರೋನಿಗೆ ಮುಕ್ತಿ !.. ...ಸರಿ,... ...

ಶಾಮಣ್ಣ

ಕೂಡ್ಲೇ ಮಂತ್ರೋದಕ ಅಭಿಷೇಕ ಆಯ್ತು ಅವನಿಗೆ ....... ಮಧ್ಯಾಹ್ನ ಹನ್ನೆರಡು ಘಂಟೇ ಸಮಯ ! ಮದುವೇಗ್ಹೋಗಿ ದ್ಹೋರೆಲ್ಲ ಸುತ್ಲೂ ನಿಂತ್ಕೊಂಡು ನೋಡ್ತಾ ಇದಾರೆ ! ಏನ್ಹೇಳ್ಲಿ ಆಗ ನಡೆದ ಕೌತುಕ ! ಆ ಕಟುಕರೋನು...... .....ಶರೀರ ಸಮೇತ ...........ಸರ್‍ರಂತ ಏರಿಬಿಟ್ಟ ಗಗನಕ್ಕೆ — ಆಕಾಶವಿಮಾನದಂತೆ !!

ಗಂಗಮ್ಮ

ಆ ಯತಿಗಳಿಗೇ, ದೇವರು ಪ್ರತ್ಯಕ್ಷ್ನಾನಂತೆ ! ಇಲ್ದೇ ಇದ್ರೆ ಇಷ್ಟೆಲ್ಲಾ ಹ್ಯಾಗೆ ಸಾಧ್ಯ ?

ಗುಂಡೂರಾಯ

ಮೊನ್ನೆ, ಸಾವಿನಕೆರೇಲಿ,........

ಶಾಮಣ್ಣ

ನಂಗೊತ್ತಿಲ್ವೇ ? ಬದುಕಿನಪುರದಾಚೆ ಇರೋದು, ಸಾವಿನ್ಕೆರೆ !

## ಗುಂಡೂರಾಯ

[ಮೆಲ್ಲನೆ] ಸ್ವಲ್ಪ ಸುಮ್ನೀ ಇರು. [ಗಟ್ಟಿಯಾಗಿ] ಅದೇ ಊರು........ ಅಲ್ಲೀಗೆ ಹೋೀತ್ತಿಂಗ್ಳು ನಾವು ಸಾಹೇಬರ ಜೊತೇಲಿ ಸರ್ಕೀಟು ಹೋಗಿದ್ದಾಗ, ಯತಿಗಳು ಅಲ್ಲಿ ಬಿಡಾರ ಮಾಡಿದ್ರು........ ಆ ವೂರಲ್ಲಿ ಒಬ್ಳಿಗೆ ದೆವ್ವ ಹಿಡಿದಿತ್ತು. 'ದೆವ್ವ ಬಿಡಿಸ್ತೇನೆ' ಅಂತ ಯತಿಗಳು ಒಪ್ಪಿಕೊಂಡ್ರು. ಆದರೆ ಆ ದೆವ್ವ ಹಿಡಿದೋಳ ಅತ್ತೆ ಹೇಳಿದ್ಲು: 'ಇವಳಿಗೆ ದೆವ್ವ ಹಿಡಿದಿಲ್ಲ, ಸುಂಸುಮ್ನೆ ಆವುಟ ಮಾಡ್ತಾಳೆ' ಅಂತ. ಇದನ್ನ ಕೇಳಿ ಯತಿಗಳಿಗೆ ಆ ಅತ್ತೇ ಮೇಲೆ ಕೋಪ ಬಂತು. ಕೂಡ್ಲೇ, ನಾವೆಲ್ಲಾ ನೋಡ್ತಿದ್ದಾಗೇ, ಯತಿಗಳು "ಯ ಯ ಯ ಹ್ರೀಂ, ಕೊ ಕೊ ಕೊ ಕ್ರೋಂ" ಅಂತ ಏನೇನೋ ಮಂತ್ರ ಉಚ್ಚಾರಣೆ ಮಾಡಿದರು............

## ಶಾಮಣ್ಣ

ಅಲ್ಲಾ, ಇಷ್ಟಾಗಿ, ಯತಿಗಳು ತಮ್ಮ ಸ್ವಂತ ಬಿಕ್ಕಲು ಯಾಕೆ ವಾಸಿಮಾಡ್ಕೊಂಡಿಲ್ಲಾ?

## ಗುಂಡೂರಾಯ

[ಮೆಲ್ಲನೆ] ಸುಮ್ಮನಿರೋ ಪಾಪೀ, ನನ್ನ ಕಟ್ಟುಕಥೆ ಬಯಲಾದೀತು. [ಗಟ್ಟಿಯಾಗಿ] ಅವರ ಲೀಲೆ ಅದು! — ಅವರ ಸ್ವಂತಕ್ಕೆ ಸಂಬಂಧ ಪಟ್ಟದ್ದು. ಆದ್ದಾಗಿರಲಿ........ಮಂತ್ರ ಉಚ್ಚಾರಣೆ ಮಾಡಿದರು. ಕೂಡ್ಲೇ ಆ ದೆವ್ವ ಹಿಡಿದಿದ್ದೋಳ ಬಾಯಿಂದ ಸಾಸುವೇ ಕಾಳಿನಷ್ಟು ಗಾತ್ರದ್ದು ಒಂದು ಕರೀ ಬಿಂದು ಹೊರಕ್ಕೆ ಬಿದ್ದು, ಒಂದು ನಿಮಿಷ ದೊಳಗಾಗಿ ಒಂದು ನಿಂಬೇಹಣ್ಣಿನ ಗಾತ್ರಕ್ಕೆ ಬೆಳೀತು! ಆಮೇಲೆ

ಒಂದು ಕಿತ್ಲೀ ಹಣ್ಣಿನ ಗಾತ್ರಕ್ಕೆ ! ಆಮೇಲೆ ಚಕ್ಕೋತದ ಹಣ್ಣು! ಹಲಸಿನ ಹಣ್ಣು!........[ಈ ಗಾತ್ರಗಳನ್ನು ಶಾಮಣ್ಣನು ಕೈಗಳಿಂದ ತೋರಿಸುತ್ತ ಕೇಳುತ್ತಿರುವನು]........ಹೀಗೆ ದೊಡ್ಡದಾಗೀ ಆಗೀ, ಆರ್ಭಟಿಸ್ತಾ ಮಾಳಿಗೇವರೆಗೆ ಬೆಳೀತು — ಕರ್‍ರಗೆ, ಗುಂಡಗೆ !!

### ಗಂಗಮ್ಮ

ಅಪೇನೋ ದೆವ್ವಾ?

### • ಗುಂಡೂರಾಯ

ಅದೇ ನೋಡಿ !

### ಗಂಗಮ್ಮ

ಅಬ್ಬಾ! ಕೇಳಿದ್ರೇನೇ ಭಯವಾಗುತ್ತಲ್ಲಾ, . ..

### ಶಾಮಣ್ಣ

ಅದು ಹಿಡಿದುಬಿಟ್ರೆ ಏನ್ಗತಿ !...........ಸರಿ, ಆಮೇಲೆ?

### ಗುಂಡೂರಾಯ

ಆಮೇಲೆ, ಯತಿಗಳು ಮಾಳಿಗೆ ಕಿತ್ಹೋದೀತು ಅಂತ ಯೋಚನೆ ಮಾಡಿ, ಒಂದು ತಿರುಮಂತ್ರ ಉಚ್ಚಾರಣೆ ಮಾಡಿದರು. ತಿರುಮಂತ್ರ ಕೇಳಿದ ಕೂಡ್ಲೀ, ಅಂಥಾ ದೆವ್ವ, ಕಿಟ್ಟನೆ ಕಿರಿಚಿಕೊಂಡು, ಗಡ ಗಡಾಂತ ನಡುಗಿ, ಸಣ್ಣದಾಗೋದಕ್ಕೆ ಪ್ರಾರಂಭಮಾಡಿ, ಒಂದು ಪಡುವಲ ಕಾಯಿ ಮಾಟಕ್ಕಿಳಿದು, ಕಡೆಗೆ ಒಂದು ಜಾಮೂನಾ ದಷ್ಟಾಯಿತು!

### ಶಾಮಣ್ಣ

ಆ ಜಾಮೂನೂ ಗಡಗಡಾಂತ ನಡುಗ್ತಾಲೇ ಇತ್ತೋ

ಗುಂಡೂರಾಯ

ಗಡಗಡಾಂತ ನಡುಗೋದೊಂದೇ ಅಲ್ದೇ ಕಿಟ್ಟಂತ ಕಿರಿಚಿಕೋ ತಾಲೂ ಇತ್ತು !

ಗಂಗಮ್ಮ

ಅದೆಲ್ಲಿಗ್ಹೋಯ್ತು ?

ಗುಂಡೂರಾಯ

ಇದನ್ನೆಲ್ಲಾ ನೋಡ್ತಾ ಆಶ್ಚರ್ಯದಿಂದ ಆ ಅಂತ ಬಾಯಿ ಬಿಟ್ಕೊಂಡು ಹತ್ತಿರದಲ್ಲೇ ನಿಂತಿದ್ಲು, ಅತ್ತೆ. ಯತಿಗಳು ಆ ಜಾಮೂನನ್ನ ನೋಡಿ ಹೀಗೆ ಬೆರಳು ತೋರಿಸಿದರು—ಅತ್ತೇ ಬಾಯಿ ಕಡೆಗೆ. ಆ ಜಾಮೂನು ಸರ್ರಂತ ಅತ್ತೇ ವದನವನ್ನ ಪ್ರವೇಶಿಸಿ, ಹೊಟ್ಟೇಲಿ ಸ್ಥಿರವಾಗಿ ನೆಲಸಿತು !

ಶಾಮಣ್ಣ

ಯತಿಗಳಿಗೆ ಕೋಪ ಇತ್ತಲ್ಲ ಅತ್ತೇಮೇಲೆ !

ಗುಂಡೂರಾಯ

ಅವರಿಗೆ ಕೋಪ ಬಂದ್ಮೇಲೆ ಕೇಳಬೇಕಾದ್ದೇನಿದೆ ! ..........ಅಂತು ಹೀಗೇ ಆ ಯತಿಗಳ ಮಹಾತ್ಮೆ ಬೇಕಾದಷ್ಟಿದೆ: ಮೂಕರಾಗಿರೋ ಹೆಂಡಂದಿರಿಗೆ ಬಾಯಿ ಬರೋಹಾಗೆ ಮಾಡಿ ಮನೇಲಿ ಗಂಡನ ಸಂಗಡ ಜಗಳಾಡೋಹಾಗೆ ಮಾಡೋದು; ಕಣ್ಣಿಲ್ಲದೋರಿಗೆ ಕಣ್ಣು ಬರೋಹಾಗೆ ಮಾಡೋದು; ಕಾಲು ಬಿದ್ಹೋಗಿರೋರಿಗೆ ಕಾಲು ಬರೋಹಾಗೆ ಮಾಡೋದು; ಮಕ್ಕಳಿಲ್ಲದೋರಿಗೆ ಮಕ್ಕಳಾಗೋ

ಹಾಗೆ ವರ ಕೊಡೋದು; ಗಂಡ ಇಲ್ಲದೋರಿಗೆ ಗಂಡನ್ನ ಬದುಕಿಸಿ ಕೊಡೋದು? ಜೀವನ ಬೇಕಿಲ್ಲದೋರನ್ನ ಸ್ವರ್ಗಕ್ಕಳಿಸೋದು; ಹೆಂಡತಿ ಬೇಕಿಲ್ಲದೋರಿಗೆ ಸನ್ಯಾಸ ಕೊಡೋದು—ಹೀಗೇ ಎಷ್ಟೋ ಇವೆ! ಅವರು ಮಾಡದೇ ಇರೋ ಕೆಲಸಾನೇ ಇಲ್ಲ.

**ಶಾಮಣ್ಣ**

ಅವರು ಸನ್ಯಾಸ ಕೊಟ್ರೆ ಚೆನ್ನಾಗಿ ಸಿದ್ಧಿ ಆಗುತ್ತೋ?

**ಗುಂಡೂರಾಯ**

ಅವರು ಸನ್ಯಾಸ ಕೊಟ್ಮೇಲೆ ಮುಕ್ತಿ ಬಿಟ್ಟದ್ವೇ ಅಲ್ಲಾಂತ ಇಟ್ಕೋ.

**ಗಂಗಮ್ಮ**

[ತನ್ನಲ್ಲಿ] ನಮ್ಮಣ್ಣನಿಗೆ ಈಗ ಮೂರು ವರ್ಷದಿಂದ ಕಾಲು ಬಿದ್ಹೋಗಿದೆ, ಪಾಪ, ಈ ಯತಿ ವಿಚಾರ ಕಾಗದಾನಾದ್ರೂ ಬರೆಸಬೇಕು.

**ಶಾಮಣ್ಣ**

ಆ ಯತಿಗಳನ್ನ ನಮ್ಮನೇಗೆ ಒಂದ್ಹೊತ್ತು ಭಿಕ್ಷಕ್ಕಾದರೂ ಕರೀ ಬೇಕೂಂತ ಅನ್ನಿಸ್ತಾ ಇದೆ ನನಗೆ. ಅಂಥಾ ಮಹಾತ್ಮರು ನಮಗೆ ಎಲ್ಲಿ ಸಿಗಬೇಕು?

**ಗುಂಡೂರಾಯ**

ಹಾಗಾದ್ರೆ ಈಗ್ಲೇ ಕರೀಬೇಕು.

**ಶಾಮಣ್ಣ**

ಹೌದು. ರಜಾದಿನ ಮತ್ತೆ ಸಿಗೋದಿಲ್ಲ.

### ಗುಂಡೂರಾಯ

ನಿನಗೆ ರಜ ಸಿಕ್ಕಿದರೂ ಸಿಕ್ಕಭೋದು, ಆದರೆ ಅವರು ನಿನಗೆ ಸಿಗ ಬೇಕಲ್ಲ. ಈ ಮಧ್ಯಾಹ್ನವೇ ಹೊರಟ್ಹೋಗ್ತಾರಂತೆ ಅವರು ಈ ವೂರಿಂದ. ಆದ್ದರಿಂದ ಈ ದಿನ ಬಿಟ್ರೆ ಬೇರೇ ದಿನ ಇಲ್ವೇ ಇಲ್ಲ. ಅವರನ್ನ ಪೂಜೇ ಮಾಡೀ, ಆಶೀರ್ವಾದ ತಕೋ, — ಭಾಳಾ ಒಳ್ಳೇದು........ಓಹೋ, ಮರೆತ್ತೇಬಿಟ್ಟೆ ! ಫೈಲ್ ತಕೊಂಡು ಸಾಹೇಬರ ಮನೆಗೋಗ್ಬೇಕಾಗಿತ್ತು ನಾನು ! ಇನ್ನು ಹೊರಡ್ತೇನೆ, ಹೊತ್ತಾಯ್ತು. ನೀನೂ ಬಾ. ಹಾಗೇ ಹೋಗ್ತಾ ದಾರೀಲಿ ಕರು ಣಯ್ಯನೋರ ಛತ್ರಕ್ಹೋಗಿ ಯತಿಗಳಿಗೆ ಹೇಳಿಬಿಡೋಣ........ [ಎದ್ದು]..... ಹೇಳಿಬಿಟ್ಟು ನೀನು ಛತ್ರದಿಂದ ವಾಪ್ಸು ಬಂದುಬಿಡು, ನಾನು ಹಾಗೇ ಸಾಹೇಬರ ಮನೆಗ್ಹೋಗ್ತೀನಿ.

### ಶಾಮಣ್ಣ

[ಎದ್ದು] ಹೋಗೋಣ ನಡಿ ಹಾಗಾದ್ರೆ.

[ ನಿರ್ಗಮ (ಅ) : ಗುಂಡೂರಾಯ, ಶಾಮಣ್ಣ ]

### ಗಂಗಮ್ಮ

[ತನ್ನಲ್ಲಿ] ಇದ್ದಕ್ಕಿದ್ಹಾಗೇ ಯತೀಗೆ ಭಿಕ್ಷೆ ಅಂತ ಹೊರಟೇಬಿಟ್ರಲ್ಲಾ! ........ಒಳ್ಳೇದೇ ಆಯ್ತು, ನಮ್ಮಣ್ಣನ ವಿಚಾರ ಯತಿಗಳಿಗೆ ತಿಳಿ ಸೋದಕ್ಕಾದರೂ ಅನುಕೂಲವಾಗುತ್ತೆ.

## [ಪ್ರವೇಶ (ಅ) : ಪಾರ್ವತಮ್ಮ ]

[ ಕಂಕುಳಲ್ಲಿ ನೀರು ತುಂಬಿದ ಬಿಂದಿಗೆ ಸಮೇತ ಪಾರ್ವತಮ್ಮ ಪ್ರವೇಶಿಸುವಳು.]

**ಪಾರ್ವತಮ್ಮ**

ಗ್ಗಂಗಂನೋರ್ರೇ, ನಮ್ಮೆಜ್ಮಾನ್ರು ಬಂದಿದ್ದಾರ್ಯೇನೂಂದ್ರೇ ? [ (ರ) ಎಂಬಲ್ಲಿ ಬಿಂದಿಗೆ ಇಳಿಸಿ, ಸೊಂಟದಮೇಲೆ ಕೈಗಳನ್ನಿಟ್ಟುಕೊಂಡು ನಿಂತು,] ಮನೇಲಿ ಉಪ್ಪು ಮುಗಿದ್ಹೋಗಿದೆ, ತಕ್ಕೊಂಡ್ಬನ್ನಿ ಅಂತ ಹೇಳಿದರೆ, ಬೆಳಗ್ಗೆ ಮನೇ ಬಿಟ್ಹೋದೋರು ಇದೀವರೆಗೂ ಪತ್ತೇನೇ ಇಲ್ಲಾ !........ನ್ನನಗೇನಂತೆ ! ಸ್ಸಾರಿಗುಪ್ಪಾಕದೇ ಹಾಗೇ ಬಡದು ಬಂದಿದ್ದೀನೀ !

**ಗಂಗಮ್ಮ**

ಏನು ಭಾವೀಗ್ಹೋಗಿದ್ದಿರಾ ಪಾರ್ವತಮ್ಮನೋರೇ ?

**ಪಾರ್ವತಮ್ಮ**

ಊಂ, ನಮ್ಮೆಜ್ಮಾನ್ರೆಲ್ಲಾದ್ರೂ ಕಣ್ಣಿಗೆ ಬೀಳ್ತಾರೇನೋಅಂತ ಬಿಂದಿಗೆ ತಕ್ಕೊಂಡ್ಹೋಗಿದ್ದೆ ಭಾವೀ ಕಡೆ........ಇಲ್ಲೆಲ್ಲೂ ಬರ್ಲಿಲ್ವೆ ಹಾಗಾದ್ರೇ ?

**ಗಂಗಮ್ಮ**

ಬಂದಿದ್ರು. ಇಬ್ರೂ ಇಷ್ಟೊತ್ತೂ ಮಾತಾಡ್ತಾ ಇಲ್ಲೇ ಇದ್ರು. ಈಗ ತಾನೇ ಹೊರಕ್ಹೋದ್ರು.

**ಪಾರ್ವತಮ್ಮ**

ಎಲ್ಲೀಗ್ಹೋದ್ರೂ?.... ...ನಿಮಗ್ಗೊತ್ತಿಲ್ವೇನೋ ಪಾಪ.

ಗಂಗಮ್ಮ

ಕರುಣಯ್ಯನೋರ ಛತ್ರಕ್ಕೆ.

ಪಾರ್ವತಮ್ಮ

ಕರುಣಯ್ಯನೋರ ಛತ್ರಕ್ಕೇ! ?........ಅಲ್ಲೇನಿದೇಂತ್ರಾ ?

ಗಂಗಮ್ಮ

ಇದೇನ್ನೀಕ್ಕೇಳ್ತೀರೀ? ಅಲ್ಲಿ ಯತಿಗಳು ಬಂದಿಳುಕೊಂಡಿಲ್ವೇ? ಅವರನ್ನ ನಮ್ಮನೇಗೆ ಭಿಕ್ಷಕ್ಕರತರಬೇಕೂಂತ ಇಷ್ಮೊತ್ತೂ ಮಾತಾಡಿದರು. ಕರೆಯೋಕ್ಹೋಗಿದಾರೆ. ಏನೋ, ದೊಡ್ಡೋರ ಪಾದ ಧೂಳೀಯಿಂದ ನಮಗೂ ಒಳ್ಳೇದಾದೀತ್ತೇನೋಂತ ಅಂದ್ಕೊಂಡ್ವು.

ಪಾರ್ವತಮ್ಮ

[ಆಶ್ಚರ್ಯದಿಂದ] ಭಾಳಾ ಸಂತೋಷಾನಮ್ಮಾ. ಪುಣ್ಯ ಬರೋ ಕಾರ್ಯ. ಅಗತ್ಯವಾಗಿ ಮಾಡಬೇಕಾದ್ದು. ನಾನೂ ಅಲ್ಲೀ ಇಲ್ಲೀ ಕೇಳಿದ್ದೀನಿ ಅವರ ಮಹಾತ್ಮೆ ವಿಚಾರ. ದೇವರು ಪ್ರತ್ಯಕ್ಷಾನಂತೆ ಅವರಿಗೆ !

ಗಂಗಮ್ಮ

ಆದ್ದರಿಂದ್ಲೇ, ನಮ್ಮಣ್ಣ ಮೂಲೇ ಹಿಡಿದಿರೋ ವಿಚಾರ ಅವರ ಮುಂದೆ ಹೇಳ್ಕೋಬೇಕೂಂತ ಯೋಚನೇ ಮಾಡಿದೀನಿ. ಅಣ್ಣನಿಗೆ ಯಾವುದೋ ದೆವ್ವದ ಕಾಟದಿಂದ ಹಾಗಾಗಿದೇಂತ ಹೇಳ್ತಾರೆ. ಈ ಯತಿಗಳು ದೆವ್ವಬಿಡಿಸೋದರಲ್ಲಿ ನಿಸ್ಸೀಮರಂತೆ. ಅವರು ಮನಸ್ಸು ಮಾಡಿದರೆ ಯಂತ್ರದಿಂದ್ಲೋ, ಮಂತ್ರದಿಂದ್ಲೋ, ತಂತ್ರದಿಂದ್ಲೋ ವಾಸಿಮಾಡ್ಯಾರು ಅಂತ ಅಂದುಕೊಂಡಿದೀನಿ.

ಪಾರ್ವತಮ್ಮ

ಓಹೋ! ಅವರು ಮನಸ್ಸು ಮಾಡಿದರೆ ಒಂದೇ ನಿಮಿಷದಲ್ಲಿ ವಾಸಿ ಮಾಡ್ತಾರೆ. ನೀವು ಪೂಜೆಪುನಸ್ಕಾರ ಎಲ್ಲಾ ಸರಿಯಾಗಿ ಮಾಡೀ, ಆಮೇಲೆ ತಿಳಿಸಿ ಈ ವಿಚಾರ. ನಾನೂ ಜಾಗ್ರತೆ ಮನೆಗ್ಹೋಗೀ ಪೂಜೆಗೆ ಅಣಿಮಾಡ್ಕೊಂಡು ಬರ್ತೇನೆ ಅಷ್ಟೊತ್ತಿಗೆ, ಅವರ ಆಶೀರ್ವಾದಕ್ಕೆ.

ಗಂಗಮ್ಮ

ಅಗತ್ಯವಾಗಿ ಬನ್ನಿ. ಈ ಹೊತ್ತು ಮಧ್ಯಾಹ್ನದಮೇಲೆ ಹೊರ ಟ್ಹೋಗ್ತಾರಂತೆ ಯತಿಗಳು ಈ ವೂರಿಂದ. ಮತ್ತೆ ಯಾವಾಗಲೋ ಅವರು ಬರೋದು.

ಪಾರ್ವತಮ್ಮ

ಈವತ್ತೇ ಹೊರಟ್ಹೋಗ್ತಾರ್ಯೇ? ಹಾಗಾದ್ರೆ ನಾನು ಜಾಗ್ರತೆ ಬರ್ತೀನಿ. [ಹೊರಟು, ಬಿಂದಿಗೆಗೆ ಕೈಹಾಕುವಳು.]

ಗಂಗಮ್ಮ

ಉಪ್ಪು ಮುಗಿದ್ಹೋಗಿದೆ ಅಂದಿರಲ್ಲಾ. ಕೊಟ್ಟಿರ್ತೇನೆ ತಕೊಳ್ಳಿ.

ಪಾರ್ವತಮ್ಮ

ಊಂ, ಹಾಗಾದ್ರೂ ಮಾಡಿ ಸಧ್ಯ. ಏನ್ಮಾಡೋದು, ಇವರೆ ಲ್ಹೋದ್ರೋ ಏನೋ, ಉಪ್ಪು ತರೋದಕ್ಕೆ ತಲೆ ತಪ್ಪಿಸ್ಕೊಂಡು.

ಗಂಗಮ್ಮ

[ಒಳಕ್ಕೆ ಹೋಗಿ ಗೋಪುರವಾಗಿ ಉಪ್ಪು ತುಂಬಿದ ಲೋಟ ತಂದುಕೊಟ್ಟು]
ನಿಧಾನವಾಗಿ ಕೊಡಿ, ಪರವಾಯಿಲ್ಲ.

## ಪಾರ್ವತಮ್ಮ

[ಉಪ್ಪಿನ ಲೋಟ ಮೇಜಿನ ಮೇಲಿಟ್ಟು] ಇದೊಂದು ಕೆಲಸ ಆಯ್ತಲ್ಲ ಬಂದದ್ದಕ್ಕೆ... ... ಅಂಧಾಗೆ, ಆ ವಿಚಾರ ಏನಾಯ್ತೊ ?

## ಗಂಗಮ್ಮ

ಅದೇ? ಪೆಟ್ ಅನ್ನೋಹಾಗಿಲ್ಲ. ಆ ಹೊತ್ತು ನೀವು ಹೇಳಿದ್ದಿರಿ ನೋಡಿ, ಅದೇ ಪ್ರಕಾರ ರೂಪಾಯಿ ಭದ್ರಮಾಡಿಕೊಂಡಿದೀನಿ. ಈ ಹೊತ್ತು ಬೆಳಗ್ಗೆ ತಿರಿಗೀ ಅದೇ ಜಗಳ ಆಯ್ತು. ಸಾಲತೀರಿ ಸ್ತೀನೀನ್ನೋ ಹಠ ಇನ್ನೂ ಬಿಟ್ಟಿಲ್ಲ ಅವರು.

## ಪಾರ್ವತಮ್ಮ

ಅಲ್ಲ, ಈ ಗಂಡಸರು ಮುನ್ನೂರು ಮೂವತ್ತು ಕಾಲಾನೂ ' ಸಾಲಾ ತೀರಿಸ್ತೀವೆ, ಸಾಲ ತೀರಿಸ್ತೀವೆ' ಅಂತ ಓಡಾಡ್ತಿರ್ತಾರಲ್ಲಾ ! ಸಾಲ ತೀರಿಸಿದೋರು ಯಾರು ಬದುಕಿದ್ದಾರೇಂತ ನಾ ಕೇಳೋದು, ಬಟ್ಮಡಿಸಿ.

## ಗಂಗಮ್ಮ

ಅದೇ ನೋಡಿ ನಾ ಕೇಳೋದೂನೂ—ಈ ಗಂಡಸರಿಗ್ಯಾಕೆ ಬುದ್ಧಿ ಇಲ್ಲಾಂತ !

## ಪಾರ್ವತಮ್ಮ

ಅವ್ವರ ಮಾತ್ನು ಕೇಳ್ತಾ ಹೋದ್ರೆ ನಮ್ಮನ್ನ ಬಿಚ್ಚೋಲೇ ಗೌರಮ್ಮ ಗಳನ್ನ ಮಾಡಿ ಕೂಡಿಸಿಬಿಡ್ತಾರೆ! ಸುಮ್ಮನೆ, .ನಾ ಹೇಳಿದ್ದಾಗೆ, ನೀವು ಎರಡು ಧರ್ಮಾವರದ ಸೀರೇನೂ ಒಂದು ಒಳ್ಳೇ ಮೂಗು ಬೊಟ್ಟೂನೂ ತರಿಸಿಟ್ಟುಕೊಳ್ಳಿ. ಮುತ್ತೈದೆ ಲಕ್ಷಣವಾಗಿ ಕಾಣಿ

ಸ್ತೀರಿ. ಬದುಕಿದಷ್ಟು ದಿವ್ಸಾನೂ ಇದ್ದೇ ಇರುತ್ತೆ ಸಾಲ. ಆದೆಂದಿಗೆ ತೀರೋದು? ........ ಅಲ್ಲ, ಇಷ್ಟಾಗಿ, ರೂಪಾಯಿ ನಿಮ್ಮ ಕೈಗೆ ಬಂದ ವಿಧಾನ ಹ್ಯಾಗ್ಗೇನ್ನೋದೇ ಹೇಳ್ಳಿಲ್ವಲ್ಲಾ ನೀವ್ವು !

ಗಂಗಮ್ಮ

ಆದೇ? ಹೇಳ್ತೇನಿ ಕೇಳಿ. ಹೋದೇಕಾದಶಿ ದಿನ ಬೆಳಿಗ್ಗೆ ನಿಮ್ಮನೇ ಯಿಂದ ಒಂದು ಮೊಳೆ ಇಸುಕೊಂಡು ಬಂದೆನಲ್ಲ, ನಿಮಜ್ಞಾಪಕ ಇದ್ಯೇ?

ಪಾರ್ವತಮ್ಮ

ಅದ್ದೇ, ಕಬ್ಬಿಣದ ಮೊಳೆ! — ಅದ್ದೇನೋ ನೇತ್ಹಾಕೋದಕ್ಕೇಂತ ತಕ್ಕೊಂಡು ಬಂದ್ಯಲ್ಲವಮ್ಮಾ.

ಗಂಗಮ್ಮ

ಆದನ್ನ, ಅಡಿಗೇ ಮನೆ ಗೋಡೇಗ್ಹೊಡದಿದ್ದೇ. ಆ ಹೊತ್ತು ಮಧ್ಯಾಹ್ನ, ರೂಪಾಯಿ ವಶಪಡಿಸ್ಕೋಳ್ಳೋ ಬಗೆ ಹ್ಯಾಗೇಂತ ಯೋಚ್ನೆ ಮಾಡ್ತಾ, ಗೋಡೇ ಎದುರೀಗೆ, ಆ ಮೊಳೆ ಮುಂದೆ, ಎರಡ್ನಿಮ್ಷ ನಿಂತಿದ್ದೆ.

ಪಾರ್ವತಮ್ಮ

ಆಮೇಲದನ್ನ ಕಿತ್ತುಬಿಟ್ಟದ್ದೀರೀ.

ಗಂಗಮ್ಮ

ಊಂ ........ ಕಿತ್ತೆನ್ಮಾಡಿದೆ ಹೇಳಿ.

ಪಾರ್ವತಮ್ಮ

ಅದ್ದೇ, ಆ ಮೊಳೇಲಿ ಟ್ರಂಕಿನ ಬೀಗ ತೆಗದು ರೂಪಾಯಿ ತಕ್ಕೊಂಡಿದ್ದೀರೀ.

ಗಂಗಮ್ಮ

ನೋಡಿದ್ರಾ, ನಿಮಗ್ಹೇಳಬೇಕಾದ್ದೇನಿದೆ? ........... ಅದೇನೋ ಹೇಳ್ತಾರಲ್ಲ — 'ತಾತನಿಗೆ ಕೆಮ್ಮೋದು ಕಲಿಸಿದರಂತೆ'!

ಪಾರ್ವತಮ್ಮ

ಆಗ ನಿಮ್ಮಜ್ಜಾನ್ರೆಲ್ಹೋಗಿದ್ರೂ?

ಗಂಗಮ್ಮ

ನಿದ್ರೆ ಹೋಗಿದ್ರು.

ಪಾರ್ವತಮ್ಮ

ಅಯ್ಯೋ ಪಾಪ! ನೀವು ದುಡ್ಡು ಅಷ್ಟೂ ತಕ್ಕೊಂಡ್ಬಿಟ್ರಾ?

ಗಂಗಮ್ಮ

ಒಂದ್ಕಾಸೂ ಬಿಡ್ಲಿಲ್ಲ.

ಪಾರ್ವತಮ್ಮ

ನಿದ್ರೇಯಿಂದ ಎದ್ಮೇಲೆ ನೋಡ್ಕೊಂಡ್ರೂಂತ್ತ ಕಾಣ್ಸತ್ತೆ ಟ್ರಂಕ್ಕೂ.

ಗಂಗಮ್ಮ

ಅದನ್ಯಾಕ್ಹೇಳ್ತೀರಿ! ಟ್ರಂಕು ನೋಡ್ಕೊಂಡೂ, ಮರೀ ಕಳಕೊಂಡ ಕರಡೀ ಹಾಗಾಡಿಬಿಟ್ರು!

ಪಾರ್ವತಮ್ಮ

ಅಯ್ಯೋ ಪಾಪ! ಆಡದೇ ಇರ್ತಾರೇನಮ್ಮಾ, ಕರಡಿಗಳಾದರೇನೂ, ಮನುಷ್ಯರಾದರೇನೂ? .......... ಒಡವೇ ಸೀರೆ ತರುತ್ಲೂ ಅವರ ದುಡ್ಡು ಅವರಿಕ್ಕೊಟ್ಬಿಡಿ; ಇಲ್ದಿದ್ರೆ ಸಾಲ ಜಾಸ್ತಿ ಆಗಿ

ಬಿಡುತ್ತೆ, ಪಾಪ್ಪ !... .....ಇನ್ನು ಹೊತ್ತಾಯ್ತಮ್ಮ , ಹೊರಡ್ತೀನಿ. ನೀವೂ ಮನೇಲಿ ಕೆಲಸ ಇಟ್ಕೊಂಡಿದ್ದೀರಿ. [ಬಿಂದಿಗೆ ಎತ್ತಿಕೊಂಡು ಹೊರಡುವಳು.]

### ಗಂಗಮ್ಮ

ಉಪ್ಪು ಇಲ್ಲೇ ಮರೆತಿರಲ್ಲಾ ಪಾರ್ವತಮ್ಮನೋರೇ.

### ಪಾರ್ವತಮ್ಮ

ಹೌದಲ್ಲ! ಬರುಬರುತಾ ಮರವು ಜಾಸ್ತಿ ಆಯ್ತು..........ಗೋಪ್ಪುರ ವಾಗಿ ಕೊಟ್ಟಿದ್ದೀರಲ್ಲವ್ಮಾ , ಅಷ್ಟುದೂರ ಹ್ಯಾಗೆ ತಕೊಂಡ್ಹೋ ಗ್ಹೋದ್ದೂ ?

### ಗಂಗಮ್ಮ

ತಾಳಿ, ತಲೇಸವರಿ ಕೊಡ್ತೀನೆ ಹಾಗಾದ್ರೆ [ತಲೆಸವರಿ ಕೊಡುವಳು.]

### ಪಾರ್ವತಮ್ಮ

[ಉಪ್ಪಿನ ಬಟ್ಟಲನ್ನು ಮೇಲೆ ಅಂಗೈ ಮುಚ್ಚುವಂತೆ ಹಿಡಿದುಕೊಂಡು] ಬರ್ತೇನಮ್ಮ ಯತಿಗಳ ಪೂಜೆ ವೇಳೆಗೆ.

[ ನಿರ್ಗಮ (ಅ) : ಪಾರ್ವತಮ್ಮ ]

### ಗಂಗಮ್ಮ

ಯತಿಗಳ ಪೂಜೆಗೆ ಏನೇನು ಅಣಿಮಾಡಿಕೋಬೇಕೋ ಏನೋ ........ಎಷ್ಹೊತ್ತಿಗೆ ಬರ್ತಾರೋ ! .... ..... ಬರ್ತಾರೋ ಬರೋದೇ ಇಲ್ವೋ ಯತಿಗಳು ! ಕರೆಯೋಕ್ಹೋಗಿರೋರು ಬರಲಿ ಮೊದ್ಲು ........ಅಂ? ಇದ್ದಕ್ಕಿದ್ದ್ಹಾಗೇ ಇಷ್ಟು ದೊಡ್ಡಕೆಲಸ ಹಚ್ಚಿಕೊಂಡ್ಬಿಟ್ರಲ್ಲಾ ಇವರೂ! ನನ್ನ ಕೂಡ ಒಂದು ಮಾತು ಸಹ ಕೇಳ್ಳಿಲ್ಲ.

## [ ಪ್ರವೇಶ (ಅ) : ಶಾಮಣ್ಣ ]

[ಶಾಮಣ್ಣನು ಎದೆಯಮೇಲೆ ಕೈ ಬಿಗಿದುಕೊಂಡು ಅನಾಸಕ್ತಿಯೋಗ ದಲ್ಲಿ ಪ್ರವೇಶಿಸುವನು.]

**ಶಾಮಣ್ಣ**

[ಪರಸ್ಪರ ದೃಷ್ಟಿಗಳು ಕಲೆತಾಗ] ಹುಂ [ಎಂದು ಆಚೆ ತಿರುಗುವನು.]

**ಗಂಗಮ್ಮ**

[ಮತ್ತೆ ಪರಸ್ಪರ ದೃಷ್ಟಿಗಳು ಕಲೆತಾಗ] ಹುಂ [ಎಂದು ಆಚೆ ತಿರುಗುವಳು.]

[ಶಾಮಣ್ಣನು ಮೇಜಿನ ಮೇಲಿರುವ ಪಾತ್ರೆಗಳನ್ನು ಒಳಗಿಟ್ಟು ಬಂದು, ಕುರ್ಚಿಗಳನ್ನು ಸರಿಪಡಿಸತೊಡಗುವನು. ಗಂಗಮ್ಮ ಎಲ್ಲವನ್ನೂ ಮೌನವಾಗಿ ನೋಡುವಳು.]

**ಗಂಗಮ್ಮ**

[ಶಾಮಣ್ಣ ಹಿಂದುಮುಂದಾಗಿರುವಾಗ ಹತ್ತಿರ ಹೋಗಿ,] ನೀವು ಮಾಡೋ ದವಲತ್ತಿಗೆ ........ [ಶಾಮಣ್ಣ ಬೆಚ್ಚಿ ತಿರುಗುವನು] ........ಯತೀಗೆ ಭಿಕ್ಷೆ ಮಾಡೋದು ಬೇರೇನೇ?

**ಶಾಮಣ್ಣ**

ನೀನಿನ್ನೇನಾದ್ರೂ ಅಂದ್ಕೋ, ನನಗೇನಾಗಬೇಕಾಗಿದೆ? ಸಾಕಾ ಗ್ಹೋಯ್ತು, ಹಾಳು ಸಂಸಾರ....ಸಾಕಾಗ್ಹೋಯ್ತು—ತಿಳೀತೇ?.... ಆ ಯತಿಗಳು ಬರಲಿ. ಸನ್ಯಾಸ ತಕೊಂಡು ಮುಕ್ತಿಮಾರ್ಗನಾದ್ರೂ ನೋಡ್ಕೋತೇನೆ.

**ಗಂಗಮ್ಮ**

[(ಯ) ಎಂಬಲ್ಲಿಗೆ ಬಂದು] ಏನಿವರಾಡ್ತಿರೋ ಮಾತೂ? ........... ನಂಗೇಕೋ ಗಾಬ್ರಿ ಆಗುತ್ತೆ. ಸನ್ಯಾಸ ತಕೊಂಡೇ ಬಿಡ್ತಾರೋ

ಏನ್ಗತಿಯೋ! ........... ತರ್ಕೋ ಬೇಡೀಂತ ಅಳ್ತಾ ಕೂತ್ಕೊಳ್ಳೀ ? ...... ಉಹುಂ, ಮತ್ತಿಷ್ಟು ಹಠ ಮಾಡ್ತಾರೆ. ......... ಅಯ್ಯೋ, ಅಷ್ಟು ಮನೋದಾರ್ಢ್ಯ ಇದೆಯೇ ಇವರಿಗೆ? .... ..... ಇದೆಲ್ಲಾ ದುಡ್ಡು ವಸೂಲ್ಮಾಡೋ ಉಪಾಯಾನೋ ಏನೋ! ........ [ಗಂಡನ ಬಳಿ ಹೋಗಿ, ಗಟ್ಟಿಯಾಗಿ] ಯತಿಗಳು ಬಂದಾಗಾ, ಐಶ್ವರ್ಯ ಕೇಳ್ಕೊಳ್ಳಿ.

**ಶಾಮಣ್ಣ**

[ನಿಟ್ಟುಸಿರಿನಿಂದ] ಶಿವಾ, ಶಿವಾ, ಶಿವಾ! [ಕುಳಿತುಕೊಳ್ಳುವನು (ಕ).

**ಗಂಗಮ್ಮ**

ಈ ಬಕಧ್ಯಾನ ಎಷ್ಟು ದಿನದಿಂದ್ಲೋ!

(ತೆರೆಯಲ್ಲಿ)

**ಯತಿವೇಷದ ಗುಂಡೂರಾಯ**

[ಗಟ್ಟಿಯಾಗಿ] ಶ ಶ ಶ್ಯಂಭೋ ಹರಹರ ಮಹಾದೇವ!

**ಶಾಮಣ್ಣ**

ಸಧ್ಯ ಬಂದ್ರಲ್ಲ ಯತಿಗಳು! [ಎದ್ದು ನಿಲ್ಲುವನು]

**ಗಂಗಮ್ಮ**

[ಪಕ್ಕಕ್ಕೆ ಸರಿದು, ತನ್ನಲ್ಲಿ] ಅಯ್ಯೋ, ಆಗ್ಲೇ ಬಂದೇ ಬಿಟ್ರಲ್ಲಾ!

**[ ಪ್ರವೇಶ (ಅ) : ಗುಂಡೂರಾಯ (ಯತಿ ವೇಷದಲ್ಲಿ).]**

[ಯತೀ ವೇಷದ ಗುಂಡೂರಾಯನು ಒಂದು ಕಾವೀ ಪಂಚೆಯನ್ನು ಸುತ್ತಿಕೊಂಡು, ಇನ್ನೊಂದು ಕಾವೀ ಧೋತ್ರವನ್ನು ಹೊದೆ ಮತ್ತು ಕಿವಿಗಳ

ಹಿಂಭಾಗದ ಮಾರ್ಗವಾಗಿ ತಲೆಯನ್ನೂ ಫಿಟ್ ಬನೀನನ್ನೂ ಆವರಿಸುವಂತೆ ಹೊದೆದುಕೊಂಡಿರುವನು; ಮತ್ತು ಕಮಂಡಲ, ರುದ್ರಾಕ್ಷಿಯ ಜಪಮಾಲೆ, ಪಾದುಕೆ, ವಿಭೂತಿಗಳಿಂದ ಭೂಷಿತನಾಗಿರುವನು. ಕೈಯಲ್ಲಿ ಇನ್ನೊಂದು ಕಾವೀ ಧೋತ್ರವನ್ನು ಮಡಿಸಿ ಹಿಡಿದುಕೊಂಡಿರುವನು. ಪ್ರವೇಶಿಸಿ, (ರ) ಎಂಬಲ್ಲಿ ನಿಂತುಕೊಳ್ಳುವನು.]

ಶಾಮಣ್ಣ

[ಯತಿಯ ಬಳಿಗೆ ಹೋಗಿ] ಯತಿಗಳೇ, ನನಗೆ ಸನ್ಯಾಶಾಶ್ರಮವನ್ನು ಕೊಟ್ಟು, ಮೋಕ್ಷಮಾರ್ಗದರ್ಶಕರಾಗಬೇಕೆಂದು ಅತ್ಯಂತ ವಿನಯ ದಿಂದ ಪ್ರಾರ್ಥಿಸುತ್ತಿದ್ದೇನೆ.

ಯತಿ

ತತತ್ತಾಳು ......... ಮಮಮ್ಮಾತು ಮ್ಮಧ್ಯದಲ್ಲಿ ಪಪಪ್ರಾರಂಭಿಸ ಬಾರದು. ಪ್ರಾರಂಭವನ್ನು ಮ್ಮೊದಲಿನಿಂದ ಮ್ಮಾಡಬೇಕು .......... ಗುಗುಗ್ಗುಂಡೂರಾಯರು ಹೇಳಿದ ಶ್ಯಾಮಣ್ಣ ಎಂಬಾತನ ಮನೆ ಇದೇನೋ?

ಶಾಮಣ್ಣ

ಹೌದು ಮಹಾತ್ಮರೇ.

ಯತಿ

ಶ್ಯಾಮಣ್ಣ ಎಂಬ ವ್ಯಕ್ತಿ ನ್ನೀನೇನೋ?

ಶಾಮಣ್ಣ

ಹೌದು ಮಹಾತ್ಮರೇ,

ಯತಿ

ಹ್ಹಾಗಾದರೆ ಮೊಮೊಮ್ಮೊದಲು ನನನಮಸ್ಕರಿಸು.

ಶಾಮಣ್ಣ

[ಅಡ್ಡಬೀಳುತ್ತ ಮೆಲ್ಲನೆ] ಏನೋ ಗುಂಡೂರಾಯ, ನಿನ್ನ ಯತೀ ವೇಷ ಪತ್ತೇ ಆಗೋ ಹಾಗಿಲ್ಲ.

ಯತಿ

[ಮೆಲ್ಲನೆ] ಸ್ವಲ್ಪ ಹೊತ್ತು ಸುಮ್ಮನಿರು. [ಗಟ್ಟಿಯಾಗಿ] ಸಸಸ್ಸನ್ಯಾಸಾಶ್ರಮ ಸಿದ್ಧಿರಸ್ತು.

ಶಾಮಣ್ಣ

[ಗಂಗಮ್ಮನಿಗೆ] ಮಹಾತ್ಮರಿಗೆ ನೀನೂ ನಮಸ್ಕಾರ ಮಾಡು.

[ಗಂಗಮ್ಮ ನಮಸ್ಕರಿಸುವಳು.]

ಯತಿ

ಸಸಸ್ಸನ್ಯಾಸಿ ಪತ್ನೀ ಭವ.

ಶಾಮಣ್ಣ

ಮಹಾತ್ಮರು ಹೀಗೆ ದಯಮಾಡಿಸಬೇಕು [(ಕ) ಕುರ್ಚಿಯನ್ನು ತೋರಿಸುವನು.]

ಯತಿ

ನನನ್ನಾವು ಹಹಹ್ಹಾಗೆ ದ್ದಯಮಾಡಿಸೋದಿಲ್ಲ, ಹಿಹಿಹೀಗೇ ದ್ದಯಮಾಡಿಸ್ತೇವೆ — ಈ ಪ್ಪೀಠದಲ್ಲೇ ಕೂಡ್ರುತ್ತೇವೆ..........ಹ್ಹಠ ಯೋಗ ನಮ್ಮದು..........[ಎಂದು ಕಮಂಡಲವನ್ನು ಮೇಜಿನ ಮೇಲಿಟ್ಟು, (ಚ) ಕುರ್ಚಿಯ ಮೇಲೆ ಪದ್ಮಾಸನದಲ್ಲಿ ಕುಳಿತು ಕ್ಷಣಕಾಲ ಧ್ಯಾನಿಸಿ, [ಆಮೇಲೆ] ........ ನನನನ್ನಮಗೆ, ಬೆಬೆಬೆಬ್ ತತತ್ತಪಸ್ಸಿಗೆ, ಕಕಕ್ಕಾಲವು ಅಯಯ್ಯಾಗ್ತಾ ಬಂತು .......... ನಿನಿನ್ನಿನ್ನ ಪಪಪ್ರಾರ್ಥನೆಯೇನು, ಬ್ಬೇಗ ಹ್ಹೇಳು.

ಶಾಮಣ್ಣ

ಸನ್ಯಾಸವನ್ನು ಕೊಟ್ಟು ಉದ್ಧರಿಸಬೇಕು ಮಹಾಸ್ವಾಮಿ.

ಯತಿ

ವುವುವುವ್ವುದ್ಧರಿಸಿಕೊಳ್ಳೋಕೆ ನ್ನಿನಗೆ ಯ್ಯೋಗ್ಯತೆ ಇದೆಯೋ ?

ಗಂಗಮ್ಮ

[ಸಶ್ರನೆ] ಇಲ್ಲ ಮಹಾಸ್ವಾಮಿ.

ಯತಿ

ನಿನಿನ್ನೀನು ಸುಸುಸ್ಸುಮ್ನಿರಮ್ಮ, ನ್ನಿನ್ನಲ್ಲ ಕ್ಕೇಳಿದ್ದು...........
ನಾವು ಪೂರ್ವಾಶ್ರಮದಲ್ಲಿ ಉಪಾಧ್ಯಾಯರಾಗಿದ್ದೋರು. ಆದ್ದರಿಂದ ಯಾವಾಗ, ಯಾರನ್ನು, ಎಷ್ಟು ಕೇಳುತ್ತೇವೋ, ಆಗ, ಅವರು, ಅಷ್ಟಕ್ಕೆ ಮಾತ್ರ ಉತ್ತರ ಕೊಡಬೇಕೆಂಬ ನಿಯಮ ನಮ್ಮದು.

ಶಾಮಣ್ಣ

ಯೋಗ್ಯತೆ ಇದೆ ಮಹಾಸ್ವಾಮಿ.

ಯತಿ

ಹಹಹ್ಹಾಗಾದ್ರೆ ಪಪಪ್ಪರೀಕ್ಷೆ ಮಾಡುತ್ತೇವೆ ...... ಈಗ, ನನನ್ನನಗೂ ನಿನಿನ್ನಿನಗೂ ಇರೋ ಭೇದ ಏನು ಹೇಳು, ನೋಡೋಣ.

ಶಾಮಣ್ಣ

ಏನೂ ಭೇದವಿಲ್ಲ, ಮಹಾಸ್ವಾಮಿ. ನಾನೂ, ನೀವೂ, ಅವಳೂ, ಅವಳ್ಹತ್ರ ಇರೋ ನೂರ್ರೂಪಾಯೀ — ಎಲ್ಲಾ ಒಂದೇ ! ಆ ಪರಾತ್ಪರ ಸ್ವರೂಪವೇ !

**ಯತಿ**

ವೆವೆವ್ವೇದಾಂತ ರೀತಿಯಾಗಿ ಸಸಸ್ಸರಿಹೋಯ್ತು.

**ಶಾಮಣ್ಣ**

ಇನ್ನು ಪ್ರಪಂಚ ರೀತಿಯಾಗಿ ನೋಡಿದರೆ, ನೀವು ಮಹಾತ್ಮರು, ನಾನು ಪಾಮರ, ಅವಳು ನನ್ನ ಅರ್ಧಾಂಗಿ, ಮತ್ತು ಅವಳ್ಹತ್ರ ಹತ್ತು ರೂಪಾಯಿನ ಹತ್ತು ನೋಟುಗಳಿವೆ.

**ಯತಿ**

ಓಹೋ! ಸಸಸ್ಸರಿ, ಗ್ಗೊತ್ತಾಯ್ತು. ನಿನಿನ್ನೀನು ತ್ತುಂಬಾ ಯೋಗ್ಯ! ಗುಗುಗು [ಕೈಗಳಿಂದ ಗುಂಡುಕಲ್ಲಿನ ಆಕಾರವನ್ನು ತೋರಿಸುತ್ತ] ಗ್ಗುಂಡೂರಾಯ ಹೇಳಿದ ವ್ಯಕ್ತಿ ಒಒ ಒಂದು ವೇಳೆ ನ್ನೀನಲ್ಲ ವಾದಾಗ್ಯೂ ಸಹ,........

**ಶಾಮಣ್ಣ**

ಮಸಲ,............

**ಯತಿ**

ಊಂ, ಮಮಮ್ಮಸಲ ನ್ನೀನಲ್ಲವಾದಾಗ್ಯೂ ಸಹ, ನಿನಗೆ ಸ್ಸನ್ಯಾಸ ಕೊಕೊಕ್ಕೊಡ್ತೀವೆ. ಅಲ್ಲದೆ ನ್ನಾವು ಈ ಮಧ್ಯಾಹ್ನ ಪ್ರಯಾಣ ಮಾಡೋದರೊಳಗಾಗಿ, ಈ ವೂರಲ್ಲಿ ಇನ್ನೂ ನಾಲಕ್ಕೂ ಜನರನ್ನ ಹುಹುಹುಡುಕ್ಕೊಂಡು, ಅಥವಾ ಹಹಹ್ಹುಟ್ಟಿಸಿಕೊಂಡು, ಹೋಗಿ ಸನ್ಯಾಸ ಕ್ಕೊಡಬೇಕೆಂದು ಸ್ಸಂಕಲ್ಪ ಮಾಡಿದ್ದೀವೆ. ಯಯಯ್ಯಾ ಕೇಂದ್ರೆ, ಸ್ಸನ್ಯಾಸಗಳ್ನ ಕ್ಕೊಡೋದು ನ್ನಮಗೆ ಥುಥುಥುಂತಾ ಇಷ್ಟವಾದ ಉದ್ಯೋಗ.

ಶಾಮಣ್ಣ

ಕಸಬು.

ಯತಿ

ಊಂ ಕ್ಕಸುಬು ........... ಆದ್ದರಿಂದ ಈ ಖ್ಖಾವೀ ಬಟ್ಟೆಯನ್ನು ಜ್ಜಾಗ್ರತೆ ಧರಿಸು. [ಖಾವೀ ಧೋತ್ರವನ್ನು ಕೊಡುವನು.]

ಶಾಮಣ್ಣ

[ಭಕ್ತಿಯಿಂದ ತೆಗೆದುಕೊಂಡು,] ಅನುಗ್ರಹ ಮಾಡಿದಿರಿ [ಎಂದು ಹೊದೆದು ಕೊಳ್ಳುವನು.]

ಗಂಗಮ್ಮ

[ಗಾಬರಿಯಿಂದ] ಅಯ್ಯೋ ಯತಿಗಳೇ, ನನ್ನ ಗಂಡನಿಗೇನ್ಮಾಡ್ತೀರಿ?

ಯತಿ

ಅಬ್ಬಬ್ಬಬ್ ಸಸಸ್ಸನ್ಯಾಸ ಕೊಕೊಕ್ಕೊಡ್ತೇವೆ, ಅಷ್ಟೇ! ಅವರು ಕ್ಕೇಳಿಕೊಂಡ್ಮೇಲೆ ಆಗ್ಹೋಯ್ತು.

ಗಂಗಮ್ಮ

ಬೇಡಿ, ದಯವಿಟ್ಟು ............ ಬೇಡಿ.

ಯತಿ

[ಕೋಪದಿಂದ ಗಂಗಮ್ಮನನ್ನು ದುರುದುರು ನೋಡಿ, ಎದ್ದು,] ಬಿಬ್ಬಿಬ್ಬಿಡೋದಿಲ್ಲ, ಬಬಬ್ಬಾರಯ್ಯಾ ಇಲ್ಲಿ [ಶಾಮಣ್ಣನನ್ನು ಎಳೆದು ಮುಂದೆ ನಿಲ್ಲಿಸಿಕೊಂಡು, ಕಮಂಡಲವನ್ನು ತೆಗೆದುಕೊಂಡು,] ಹಿಹಿಹ್ಹಿಡಿಯಯ್ಯಾ ಮಮಮ್ಮಂತ್ರೋದಕಾ .......... [ಶಾಮಣ್ಣ ತೀರ್ಥಕ್ಕೆ ಕೈನೀಡುವನು. ಯತಿ ನೀರು ಹಾಕಿ,] ........... ಕುಕುಕುಕ್ಕುಡಿ.

*

**ಗಂಗಮ್ಮ**

[ಗಂಡನ ಕೈಯ ನೀರನ್ನು ಹಿಂದಕ್ಕೆ ಚೆಲ್ಲಿಸಿ] ನನ್ನಾಣೆ ಬೇಡ.

**ಯತಿ**

ನಿನಿನ್ನಿನ್ನಾಣೆ ಬಿಬಿಬ್ಬಿಡೋದಿಲ್ಲ ........ ಹಹ್ಠ ಹಠಯೋಗ ನಮ್ದು.

**ಗಂಗಮ್ಮ**

ಯತಿಗಳೇ, ನಿಮಗೆ ಐವತ್ತು ರೂಪಾಯಿ ಪಾದಪೂಜೆ ಮಾಡ್ತೇನೆ, ಬಿಟ್ಟುಬಿಡಿ.

**ಶಾಮಣ್ಣ**

ಅಷ್ಟಾದರೂ ಮಾಡಿ ಪುಣ್ಯ ಕಟ್ಟಿಕೊ.

**ಯತಿ**

[ಶಾಮಣ್ಣನಿಗೆ ಸುಮ್ಮನಿರೆಂದು ಸಂಜ್ಞೆಮಾಡಿ,] ಐ ಯ್ಯೈ ಯ್ಯೈ ವ ತ್ತು ರ್‍ರೂಫಾಯಿ ನನಗೇನೂ ಬೇಡ ..........ಏನಯ್ಯ, ನಮ್ಮನ್ನ ಅಅಹ್ಠ ಗೌರವಪಡಿಸ್ಬೇಕೂಂತ ಯೆಯೆಯೆಷ್ಟು ವರ್ಷದಿಂದ ಆಲೋಚಿಸಿದ್ದೆ? ನ್ನಿನಗೆ ಸ್ಸನ್ಯಾಸ ಬ್ಬೇಕೋ ಬೆಬೆಬೆಬ್ಬೇಡವೋ, ನ್ನಿಜವಾಗಿ ಹೇಳು.

**ಗಂಗಮ್ಮ**

ಈಗ್ಲಾದ್ರೂ ಬೇಡಾನ್ನಿಂದ್ರೆ, ಬೇಡಿಕೋತೀನಿ.

[ಶಾಮಣ್ಣನು ಯೋಚಿಸುತ್ತಿರುವನು.]

**ಯತಿ**

ಯೆಯೆಯ್ಯೇನಯ್ಯಾ? ಬೆಬೆಬ್ಬೇಕೋ, ಬ್ಬೇಡವೋ, ಹೇಳು. [ಎಂದು ತಲೆಹಾಕುವನು.]

### ಶಾಮಣ್ಣ

ಬೇಕು ಮಹಾಸ್ವಾಮಿ, ಇವಳ ಸಂಗಡ ಜಗಳ ಆಡೀ, ಸಂಸಾರ ದಲ್ಲಿ ಬೇಸರ ಹುಟ್ಟಿಹೋಗಿದೆ. ತ್ಯಜಿಸಿಬಿಡ್ತೇನೆ ........... ತ್ಯಜಿಸಿ ಬಿಟ್ಟು, ಜೋಗದ ಜಲಪಾತದ ಹೊಟಲಿನ ಪಕ್ಕದ ಮರದ ಕೆಳಗೋ, ಅಥವಾ ಹಂಪೆ ದೇವಸ್ಥಾನದ ಅರ್ಚಕರ ಮನೆ ಪಕ್ಕದ ಬಂಡೇಮೇಲೋ ಒಂದು ಆಶ್ರಮ ಮಾಡ್ಕೊಂಡು, ದೇವರು ಪ್ರತ್ಯಕ್ಷ ಆಗೋತನಕ ಉಗ್ರವಾಗಿ ತಪಸ್ಸು ಮಾಡ್ತೇನೆ.

### ಯತಿ

ಹಹ್ಹಹ್ಹಾಗೆಂದು ಥಥಥಟ್ಟನೆ ಯಾಕ್ಹೇಳ್ಳಿಲ್ಲ? ನಿನ್ನ ಮ್ಮನಸ್ಸಿನ ಸ್ಥೈರ್ಯದಲ್ಲಿ ಈಗ ನಮಗೆ ಅನುಮಾನ ಉಂಟಾಗಿದೆ. ಇನ್ನೈದು ನಿಮಿಷ ನಾವು ದೆದೆದ್ದೇವರ ಮನೇಲಿ ಕುಳಿತು, ಧ್ಯಧ್ಯಧ್ಯಾನಾ ಮಾಡ್ತೇವೆ. ಹಾಗೂ ಅಅಅಯಿದು ನಿಮಿಷಕ್ಕೊಮ್ಮೆ ಧಧಧ್ಯಾನಾ ಮಾಡೋದು ನಮ್ಮಪ್ಪಪಪಪ್ಪದ್ಧತಿ. ನ್ನಮ್ಮಧ್ಯಾನ ಮುಗ್ಯೋ ದ್ರೊಳಗಾಗಿ ನ್ನಿನ್ನ ಮನಸ್ಸು ಬಬಬ್ಬದ್ಲಾಯ್ಸುತ್ತೇನೋ ನ್ನೋಡ್ತೇವೆ ದ್ದಾರೀ ತ್ಪೋರ್ಸ್ಸು, ದ್ದೇವರ ಮನೆಗೆ.

### ಶಾಮಣ್ಣ

ಹೀಗೆ ದಯಮಾಡಿಸಬೇಕು; ಹೀಗೆ..........[ಯತಿಯನ್ನು (ಉ) ಬಾಗಿಲ ವರೆಗೆ ಬಿಟ್ಟು] ಹೀಗ್ಹೋಗಿ ಎಡಕ್ಕೆ ತಿರುಕ್ಕೊಳ್ಳಿ.

[ ನಿರ್ಗಮ (ಉ) : ಯತಿ ]

### ಗಂಗಮ್ಮ

ಹಾಳಾದ ಯತಿ ಯಾಕೆ ಬಂದಿದ್ದಾನು!..........ಅಯ್ಯೋ, ನಿಮ್ಮನ್ನೇ ಕಾವೀ ಬಟ್ಟೇಲಿ ನೋಡ್ಲಾರೆ ... ...... ಸನ್ಯಾಸ ತಕೋಬೇಡಿ ............ ಇನ್ಮೇಲೆ ನಿಮಗ್ಹೆದರಿಕೊಂಡಿರ್ತೀನಿ... ........

### ಶಾಮಣ್ಣ

[ಕೋಪದಿಂದ] ಹುಂ. ಹೆದರಿಕೊಂಡಿರೋದೊಂದೇ ಅಲ್ಲಾ ........... ಹೆದರಿ, ತತ್ರೀ ಹಾಕಬೇಕು, ಗೊತ್ತಾಯ್ತೋ ?

### ಗಂಗಮ್ಮ

ಊಂ.

### ಶಾಮಣ್ಣ

ಎಲ್ಲಿ, ಹಾಗಾದರೆ ಹೇಳಿದ್ಹಾಗೆ ಕೇಳು ... ಎಡಕ್ಕೆ ತಿರುಗು [ತಿರುಗುವಳು] ........ ಕೂತುಕೋ [ಮೊಣಕಾಲೂರಿ ಅವನ ಮುಂದೆ ಕುಳಿತುಕೊಳ್ಳುವಳು] ........ ಬಂದ್ಯೋ ದಾರೀಗೇ ? ನಮಸ್ಕಾರ ಮಾಡು. [ಮಾಡುವಳು] ........ ಎದ್ನಿಂತ್ಕೋ [ನಿಲ್ಲುವಳು] ........ ಈ ಸಲ ಒಳಕ್ಹೋಗೀ, ರೂಪಾಯಿ ತಕೊಂಡ್ಬಾ ಹೋಗು.

### ಗಂಗಮ್ಮ

[ನಿಧಾನವಾಗಿ ನಾಲ್ಕು ಹೆಜ್ಜೆ ಹಾಕಿ, (ಯ) ಎಂಬಲ್ಲಿ ಯೋಚಿಸುತ್ತ ನಿಂತು, ತನ್ನಲ್ಲಿ] ನನಗ್ಯಾಕೋ ಅನುಮಾನವಾಗುತ್ತೆ ........... ದುಡ್ಡಿಗೋಸ್ಕರ ಯಾರಾದ್ರೂ ಸನ್ಯಾಸ ತಕೋತಾರ್ಯೇ ? ..... ..... [ಗಂಡನಿಗೆ] ........ ನಿಮಗೇ, ಪ್ರಪಂಚ ಬೇಸರವಾಗಿದೆ ಅಂದುಕೊಂಡಿದ್ದೆ ಇಷ್ಟೊತ್ತೂ. ಈಗ್ಗೊತ್ತಾಯ್ತು ನಿಮ್ಮ ಮನಸ್ಸಿನ ಗಟ್ಟಿ. ಆ ಯತಿ ಬರಲಿ.

ನೀವು ದುಡ್ಡಿಗೋಸ್ಕರ ಸನ್ಯಾಸ ತಕೊಳ್ಳೋವರು, ಮನಸು ಗಟ್ಟಿ ಇಲ್ಲಾಂತ ಹೇಳಿ ಕಳಿಸಿಬಿಡ್ತೀನಿ.

**ತೆರೆಯಲ್ಲಿ ಯತಿ**

ಶ್ಯಂಭೋ ಹರಹರ ಮಹಾದೇವ.

**ಶಾಮಣ್ಣ**

[ಗಂಗಮ್ಮನಿಗೆ] ಸನ್ಯಾಸ ತಕೊಳ್ಳೋಕೆ ಮೊದಲು ಋಣಮುಕ್ತನಾದರೂ ,ಆಗೋಣ ಅಂದ್ರೆ ನೀನು ದುಡ್ಡು ಕೊಡೋ ಹಾಗಿಲ್ಲ. ಹೋಗ್ಲಿ, ಎಲ್ಲಾ ತ್ಯಜಿಸೋನಿಗೆ ಸಾಲದ ಚಿಂತೆ ಇನ್ಯಾಕೆ ?

**[ ಪ್ರವೇಶ (ಉ) : ಯತಿ ]**

**ಯತಿ**

ಏನಾಯ್ತು ವಿಚಾರ ?

**ಶಾಮಣ್ಣ**

[ದುಡ್ಡು ಇನ್ನೂ ಬರಲಿಲ್ಲವೆಂದು ಕೈಸನ್ನೆ ಮಾಡಿ] ಸನ್ಯಾಸ ಕೊಟ್ಟು ಉದ್ಧಾರ ಮಾಡಬೇಕು ಸ್ವಾಮಿ.

**ಗಂಗಮ್ಮ**

ಇವರ ಮನಸ್ಸು ಗಟ್ಟಿ ಇಲ್ಲಾ ಸ್ವಾಮೀ; ದುಡ್ಡಿಗೋಸ್ಕರವಾಗೀ......

**ಯತಿ**

[ಘೋರಣೆಯಿಂದ] ಉಶ್, ಅಆಅದೊಂದೂ ನಾವು ಕೇಳೋದಿಲ್ಲ. ನಿನಿನಿನಗ್ಯಾಕಮ್ಮ ? ಸ್ಸುಮ್ನಿರು. ಅಯ್ಯಯ್ಯ್‌ಬ್‌ಬ್ ಎಲ್ಲವೂ

ನಮ್ಮ ಅಂತಶ್ಚಕ್ಷುಸ್ಸಿಗೆ ವ್ವೇದ್ಯವಾಗೇ ಇದೆ. ಆತ ಸನ್ಯಾಸ ಬೆಬೆ ಬ್ಬೇಕೂಂತ ಇರೋವಾಗ ನಾವು ಕೊಡದೇ ಹ್ಯಾಗೆ ಬಿಡ್ತೇವೆ ? ಕ್ಕೊಟ್ಟುಬಿಡ್ತೇನೆ, ಹಿಡಿ. [ ಕಮಂಡಲದಿಂದ ತೀರ್ಥ ಹಾಕುವನು. ಶಾಮಣ್ಣ ಅದನ್ನು ಹಾಗೇ ಕೈಯಲ್ಲಿಟ್ಟುಕೊಂಡು ನಿಲ್ಲುವನು.]

### ಗಂಗಮ್ಮ

[ಅಳುತ್ತ] ಆಯ್ಯೋ, ಮಗು ಎಲ್ಹೋದ್ನೋ, ಅವನಾದ್ರೂ ಬರ ಲಿಲ್ಲ .........ನಿಮ್ಮಗನ್ನಾದ್ರೂ ನೆನಸ್ಕೊಂಡು, ಬೇಡಾನ್ನಿಂದ್ರೆ.

### ಶಾಮಣ್ಣ

ನಾನ್ಯಾಕಂದೇನೂ ! ಅನ್ನೋದಿಲ್ಲ.

### ಯತಿ

ನೋನೋನ್ನೋಡಿದ್ಯಾಮ್ಮ? ಆತನ ಮನುಸ್ಸು ಅಷ್ಟು ದುದು ದೃಢವಾಗಿರೋವಾಗ ನಾನೇನು ಮಾಡೋದಕ್ಕಾಗುತ್ತೆ? ಬೆಬೆ ಬ್ಬೇಡಾಂತ ಆತನ ಬಬಬ್ಬಾಯಲ್ಲಿ ಹೊರಡ್ಸು, ಬಿಬಿಬ್ಬಿಟ್ ಬಿಡ್ತೇನೆ.

### ಗಂಗಮ್ಮ

ನೀವು ಸನ್ಯಾಸ ತಕೊಂಡ್ಬಿಟ್ರೆ ನನ್ನಗತಿಯೇನು ? ..........ಉಂ.......... ಆಮೇಲೆ ಧರ್ಮಾವರದ ಸೀರೆ, ಮೂಗುಬೊಟ್ಟು ತಂದಿಟ್ಕೊಂಡ್ರೆ ಜನ ಏನಂದಾರು !.......... ಉಂ.......... ಆದ್ರಿಂದ ಬೇಡಾನ್ನಿಂದ್ರೇ.

### ಶಾಮಣ್ಣ

[ಯತಿಯ ಕಡೆ ನೋಡುವನು. ಯತಿಯು ಅನ್ನಬೇಡವೆಂದು ಸಂಜ್ಞೆ ಮಾಡು ವನು.]........ಬೇಡ ಅನ್ನೋಕಾಲ ಹೋಯ್ತು. ಈಗ ನನ್ನ ಮನ

ಸ್ಸಿನ ಸ್ಥಿತೀನೇ ಬದಲಾಗಿಬಿಟ್ಟಿದೆ ! ಎಲ್ಲಿ ನೋಡಿದರೂ ಆ ಪರಾತ್ಪರ ಸ್ವರೂಪವೇ ಕಾಣ್ಸುತ್ತೆ ! ನೀನೂ ಸಹ ಆ ಆದಿಶಕ್ತೀ ಅವತಾರವೇ ಅನ್ನೋದರಲ್ಲಿ ನನಗೆ ಎಳ್ಳಷ್ಟೂ ಸಂಶಯ ಇಲ್ಲ. ಹೀಗಿರೋವಾಗ, ನಾನು ಅಂದರೇನು, ನೀನು ಅಂದರೇನು, ನಿನ್ನ ಗತಿ ಅಂದರೇನು? ಅವರವರ ಗತಿ ಅವರವರದು.

### ಗಂಗಮ್ಮ

[ಗಟ್ಟಿಯಾಗಿ ಅಳುತ್ತ] ಆಯ್ಯೋ, ಏನ್ಮಾಡ್ಲೀ, ಎಲ್ಹೋಗ್ಲೀ,...........

### ಯತಿ

[ಕೋಪದಿಂದ] ಭಭಭಾಳಾ ಚನ್ನಾಯ್ತು ! ಏನಯ್ಯ, ಈ ನಿನಿನಿಮ್ಮ ಪ್ರಪ್ರಪ್ರಲಾಪಗಳನ್ನ ನೋಡೋದಕ್ಕೋ ನಾವು ಗಗಗ ರರರ ಸಸಸ ಬಂದಿರೋದು?

### ಶಾಮಣ್ಣ

ಸಾವಕಾಶವೇನೂ ಇಲ್ಲ ಮಹಾಸ್ವಾಮಿ.

### ಯತಿ

ಕುಕುಕ್ಕುಡಿ ಹಾಗಾದ್ರೆ .......... [ಶಾಮಣ್ಣನು ತೀರ್ಥವನ್ನು ಕಣ್ಣಿಗೊತ್ತಿಕೊಂಡು ಕುಡಿಯುವನು.] ............... ಹಹಹಹ್ಹಾಗೆ ಮೂರು ಸಲ ಮ್ಮಂತ್ರೋದಕ ಹಾಕಿಸಿಕೊಂಡು ಕುಕುಕ್ಕುಡಿದರೆ ಮುಮ್ಮುಮ್ಮುಗೀತು. ಹಿಹಿಹ್ಹಿಡಿ ಇನ್ನೊಂದ್ಸಲ [ತೀರ್ಥ ಹಾಕುವನು, ಶಾಮಣ್ಣ ಕುಡಿಯುವನು.] ಎಷ್ಟು ಸಲ ಆಯ್ತು?

### ಶಾಮಣ್ಣ

ಎರಡು ಸಲ ........... ಆಗ ಹಾಕಿದ್ದು ಅವಳು ಚೆಲ್ಲಿಸಿಬಿಟ್ಳು. ಈಗ ಇನ್ನೊಂದೇ ಸಲ ಬಾಕಿ ಇರೋದು.

### ಗಂಗಮ್ಮ

ಗುರುಗಳೇ, ದಯೆ ತೋರಿಸಿ, ಕೊಡಬೇಡಿ.

### ಯತಿ

ಕೊ ಕೊ ಕೊ ಕ್ಕೊಟ್ಟದ್ದೂ ಕ್ಕೊಟ್ಟದ್ದೇ. ಯ ಯ ಯ್ಯಾಕೆ ಬಿಡೋದು?.......... ಹ್ಹಿಡಿಯಯ್ಯಾ ಮೂರನೇ ಸಲ........ [ಶಾಮಣ್ಣ ಕೈ ಒಡ್ಡುವನು.]........ ಅಯಯ್ಯೈವತ್ತು ರೂಫಾಯಿ ಪಾದಪೂಜೆ ಗೋಸ್ಕರ ಸಸಸ್ಸನ್ಯಾಸಾ ಕೊಡೋ ಭಾಗ್ಯ ಕಳಕೊಳ್ಳೇ? [ಎಂದು ಗೊಣಗುತ್ತ ಒಂದು ಸಲ ಗಂಗಮ್ಮನ ಕಡೆ ನೋಡಿ, ಕಮಂಡಲವನ್ನು ಶಾಮಣ್ಣನ ಕೈ ಬಳಿಗೆ ಹಿಡಿಯುವನು.]

### ಗಂಗಮ್ಮ

[ಉದ್ವೇಗದಿಂದ ಬಂದು] ಯತಿಗಳೇ, ಒಂದು ನೂರ್ರೂಪಾಯಿ ಪಾದ ಪೂಜೆ ಮಾಡ್ತೀನಿ...........

### ಯತಿ

[ಅವಸರದಿಂದ] ಉಉಊ ಮ್ಮಾಡು ಮತ್ತೆ, ಬೇಗ [ಎಂದು ಕೈಯಿಂದ ತನ್ನ ಪಾದಗಳನ್ನು ತೋರಿಸುವನು.]

### ಗಂಗಮ್ಮ

[ಒಳಕ್ಕೆ ಹೋಗುತ್ತ] ಸಧ್ಯ, ಇಷ್ಟುಮಟ್ಟಿಗೊಪ್ಪಿಕೊಂಡರಲ್ಲ ...........

[ನಿರ್ಗಮ (ಇ) : ಗಂಗಮ್ಮ]

**ಯತಿ**

ತರರರರ! ..........

**ಶಾಮಣ್ಣ**

ಭಲಾ, ಭಲಾ ಗುಂಡೂರಾಯನೋ ನೀನು!

**ಯತಿ**

ಇನ್ನೂ ತಾಳಪ್ಪಾ, ಕೈಗೆ ದುಡ್ಡು ಬೀಳೋತನಕ ಅನುಮಾನವೇ ನನಗೆ. There is many a slip between the cup and the lip!

**ಶಾಮಣ್ಣ**

ಅದೇನೋ ನಿಜವೇ ಅನ್ನು.

[ಯತಿಯು (ಚ) ಕುರ್ಚಿಯಲ್ಲಿ ಕುಳಿತುಕೊಳ್ಳುವನು. ಶಾಮಣ್ಣ ಅವನ ಪಕ್ಕದಲ್ಲಿ ನಿಲ್ಲುವನು.]

**[ಪ್ರವೇಶ (ಇ) : ಗಂಗಮ್ಮ]**

[ತಟ್ಟೆಯಲ್ಲಿ ಪೂಜಾಸಾಮಗ್ರಿಯನ್ನೂ ನೋಟುಗಳನ್ನೂ ಇಟ್ಟುಕೊಂಡು ಬರುವಳು. ಯತಿ ಕಣ್ಣುಮುಚ್ಚಿಕೊಂಡು ಅಗಾಧವಾದ ಧ್ಯಾನದಲ್ಲಿರುವನು.]

**ಗಂಗಮ್ಮ**

[ಮೊಳಕಾಲೂರಿ ಕುಳಿತು, ಯತಿಯ ಮುಂದಿರುವ ಪಾದುಕೆಗಳಿಗೆ ಪೂಜೆ ಮಾಡಿ, ಎದ್ದುನಿಂತು, ನೋಟುಗಳುಳ್ಳ ತಟ್ಟೆಯನ್ನು ನೀಡಿ,] ಸ್ವೀಕರಿಸಿ ಉದ್ಧಾರ ಮಾಡಬೇಕು.

**ಯತಿ**

[ಧ್ಯಾನವನ್ನು ತೊರೆದು, ಕಣ್ಣುಬಿಟ್ಟು] ಓಹೋ! ಎಷ್ಟೊತ್ತಾಯ್ತಮ್ಮ ನೀ ಬಂದು? [ಎನ್ನುತ್ತ ನೋಟುಗಳನ್ನು ತೆಗೆದುಕೊಳ್ಳುವನು.]

**ಶಾಮಣ್ಣ**

ಮಹಾತ್ಮರು ನನಗೆ ಸನ್ಯಾಸಾನೇ ಕೊಟ್ಟಿದ್ರೆ ಚನ್ನಾಗಿತ್ತು.

**ಯತಿ**

ಅದೆಲ್ಲಾ ನಮ್ಮಿಷ್ಟ. [ನೋಟುಗಳನ್ನು ಸೊಂಟಕ್ಕೆ ಸೇರಿಸುವನು; ಆಗ ಒಳಗಿನ ಫಿಟ್ ಬನಿಯರ್ನ ಪ್ರೇಕ್ಷಕರಿಗೆ ಕಾಣಿಸುವುದು. ಗಂಗಮ್ಮ ಮೊಳ ಕಾಲೂರಿ ಕುಳಿತು ನಮಸ್ಕರಿಸಿ ಎದ್ದು ನಿಲ್ಲುವಳು.] ............ಹೋಗ ಲಮ್ಮ, ನಿಮ್ಮ ಮಗು ಇದಾನೆ ಅಂದಿರಲ್ಲ. ಅವನಿಗೋಸ್ಕರ ಸುಮ್ಮ ನಾಗಿದೇನೆ. ಅವನೆಲ್ಲಿ? ಆಶೀರ್ವಾದಕ್ಕೆ ಬರಲೇ ಇಲ್ವಲ್ಲಾ? ಅವ ನೊಬ್ಬನೇ ಮಗನೋ?

**ಗಂಗಮ್ಮ**

[(ಯ) ಬಳಿಗೆ ಬಂದು, ತನ್ನಲ್ಲಿ] ಗಂಡಾಂತರ ಗೆದ್ದಾಗಾಯ್ತು [ಯತಿಗೆ] ಅವನೊಬ್ಬನೇ ಮಗ. ಹೊರಗೆಲ್ಲೋ ಆಡೋದಕ್ಹೋಗಿದಾನೆ.

**ಯತಿ**

ನಾವಿನ್ನು ಹೊರಡ್ತೇವಮ್ಮ. ಮಧ್ಯಾಹ್ನ ಪ್ರಯಾಣ ಇದೆ, ನಿಲ್ಲೋ ದಕ್ಕಾಗೋದಿಲ್ಲ. [ಎಂದು ಪಾದುಕಿಗಳನ್ನು ಹಾಕಿಕೊಳ್ಳುತ್ತಿರುವನು.]

**ಶಾಮಣ್ಣ**

[ಬಿಕ್ಕಲು ಮಾತಾಡೆಂದು ಯತಿಗೆ 'ಬೆಬೆಬೆಬ್' ಎಂದು ಮೆಲ್ಲಗೆ ಸಂಜ್ಞೆಮಾಡು ವನು. ಅದರೆ ಯತಿ ನೋಡುವುದಿಲ್ಲ. ಶಾಮಣ್ಣ ಕೈ ಹಿಸುಕಿಕೊಳ್ಳುತ್ತ (ರ) ಎಂಬಲ್ಲಿಗೆ ಬಂದು ತನ್ನಲ್ಲಿ] ದುಡ್ಡು ಕೈಗೆ ಬಿದ್ದ ಕೂಡ್ಲೇ ಇವನು ಬಿಕ್ಕೋದೇ ಮರೆತುಬಿಟ್ನಲ್ಲಾ! ಎಲ್ಲಿ ಸಿಕ್ಕಿಬೀಳ್ತಾನೋ ಏನು ಕಥೆಯೋ! [ಮತ್ತೆ ಹಿಂದಕ್ಕೆ ಹೋಗಿ ವ್ಯರ್ಥವಾಗಿ ಸಂಜ್ಞೆಮಾಡುತ್ತಿ ರುವನು.]

## ಯತಿ

ನಿಮ್ಮ ಪಾದಪೂಜೆಯಿಂದ ಸಂತುಷ್ಟನಾಗಿದ್ದೇನೆ. ಪರಮಾತ್ಮನು ನಿಮಗೆ ಒಳ್ಳೇದು ಮಾಡಲಿ. ನಿಮ್ಮ ಪ್ರಾರ್ಥನೆ ಏನಿದ್ದಾಗ್ಯೂ ನಾವು ಮತ್ತೊಮ್ಮೆ ಈ ಊರಿಗೆ ಬಂದಾಗ ಲಾಲಿಸ್ತೇವೆ. ಈ ದಿನ ಕಾಲ ಆಗ್ಹೋಯ್ತು. ಪ್ರಯಾಣ ಇದೆ. ಸಕಲೈಶ್ವರ್ಯಮಸ್ತು, ಸೌಭಾಗ್ಯಮಸ್ತು, ಸಂತಾನಮಸ್ತು, ಇಷ್ಟಫಲಾವಾಪ್ತಿರಸ್ತು!

## ಗಂಗಮ್ಮ

ಈ ಯತೀಗೆ ಇದ್ದಕ್ಕಿದ್ದಾಗೇ ಬಿಕ್ಕಲು ಶುರುವಾಯ್ತಲ್ಲಾ! ...... ...........ನನಗ್ಯಾಕೋ ಅನುಮಾನ ........... [ಶಾಮಣ್ಣ ಯತಿಗೆ ಇನ್ನೂ ಸಂಜ್ಞೆ ಮಾಡುತ್ತಲೇ ಇರುವನು. ಅದನ್ನು ಯತಿ ನೋಡುವುದಿಲ್ಲ, ಆದರೆ ಗಂಗಮ್ಮ ನೋಡುವಳು.]

## ಯತಿ

ಮಧ್ಯಾಹ್ನ ಆಗ್ತಾ ಬಂತು. ಏನಯ್ಯಾ, ಶಾಮಣ್ಣಾ, ಹೀಗೆ ಬಾ. ನಿನಗೊಂದು ಘನಮಂತ್ರೋಪದೇಶಮಾಡಿ ಹೋಗ್ತೇನೆ. [ಶಾಮಣ್ಣನ ಕಿವಿಯಲ್ಲಿ ಮೆಲ್ಲನೆ] ಅಥ ಮಹಾಮಂತ್ರಸ್ಯ— ಹೇಳು.

## ಶಾಮಣ್ಣ

[ಮೆಲ್ಲನೆ] ಅಲ್ವೋ, ಕೈಗೆ ದುಡ್ಡು ಬಿದ್ದ ತಕ್ಷಣ ಬಿಕ್ಕೋದನ್ನೇ ಮರೆತುಬಿಟ್ಯಲ್ಲೋ............

## ಯತಿ

[ಬೆಚ್ಚಿ, ಮೆಲ್ಲನೆ] ಎಂಥಾ ಕೆಲಸವಾಯ್ತು!.... ......ಹೊರಟೇ ಹೋಗ್ತೀ ನಲ್ಲ ಈಗ...........ಬೇಗ ಹೇಳು. [ಮೆಲ್ಲನೆ ಏನನ್ನೋ ಹೇಳಿಕೊಡುತ್ತಿರುವನು.]

### ಗಂಗಮ್ಮ

ಬಿಕ್ಲೇ ಇಲ್ಲವಲ್ಲಾ! ಇದು ಮೋಸವೇ ಸರಿ [ಸ್ವಲ್ಪ ಹತ್ತಿರ ಹೋಗುವಳು.]

### ಯತಿ

[ಅವಸರವಾಗಿ] ಈಗ ಹೇಳಿಕೊಟ್ಟ ಮಂತ್ರ ಪ್ರತಿನಿತ್ಯ ಪುನಶ್ಚರಣೆ ಮಾಡಿಕೋ. ನಾವಿನ್ನು ಹೋಗ್ತೇವೆ. [ಎಂದು ಅವಸರವಾಗಿ ಏಳು ವನು. ಹೊದೆದಿರುವ ಧೋತ್ರವನ್ನು ಸರಿಪಡಿಸಿಕೊಳ್ಳುವ ಭರದಲ್ಲಿ ಅದು ತಲೆಯಿಂದ ಜಾರುವುದು—ಕ್ರಾಪು ಕಾಣಿಸುವುದು.]

### ಗಂಗಮ್ಮ

ಕ್ರಾಪು!!...........ಕಪಟ ಯತಿಯೇ! ......ಯಾರು? .. .... ಗುಂಡೂ ರಾಯರೇ? ಊಹೂಂ!

### ಗುಂಡೂರಾಯ

ತೆಗಿ, ತೆಗಿ [ಎಂದು ಶಾಮಣ್ಣನನ್ನು ಪಕ್ಕಕ್ಕೆ ತಳ್ಳಿ (ಅ) ಬಾಗಿಲ ವರೆಗೆ ಅವಸರವಾಗಿ ಹೋಗುವನು. ಆ ವೇಳೆಗೆ ಸರಿಯಾಗಿ ಪಾರ್ವತಮ್ಮ ಬಾಗಿಲಿಗೆ ಬರುವಳು.]

## [ ಪ್ರವೇಶ (ಅ) : ಪಾರ್ವತಮ್ಮ ]

[ಪಾರ್ವತಮ್ಮ ಪೂಜಾ ಸಾಮಗ್ರಿಯ ತಟ್ಟೆ ಸಮೇತ ಪ್ರವೇಶಿಸುವಳು. ಗುಂಡೂರಾಯ ಆಕೆಯ ಮುಖ ನೋಡಿ, ಸರ್ರನೆ ಹಿಂದಿರುಗಿ, (ಚ) ಕುರ್ಚಿಯ ಬಳಿ ಶಾಮಣ್ಣನ ಹಿಂದೆ ನಿಂತು, ಶಾಮಣ್ಣನನ್ನು ಮುಂದಕ್ಕೆ ತಳ್ಳುವನು. ಶಾಮಣ್ಣ, ಗುಂಡೂರಾಯ ಇಬ್ಬರೂ ವಕ್ರವಾಗಿ ನಿಂತಿರುವರು. ಪಾರ್ವತಮ್ಮ ತಟ್ಟೆಯನ್ನು ಮೇಜಿನ ಬಳಿ ಇಟ್ಟು, (ರ) ಎಂಬಲ್ಲಿ ಸೊಂಟದ ಮೇಲೆ ಕೈಗಳನ್ನಿಟ್ಟುಕೊಂಡು ನಿಂತು ಸುತ್ತಲೂ ನೋಡುವಳು.]

### ಗಂಗಮ್ಮ

[ (ಲ) ಬಳಿ ನಿಂತು] ಅಯ್ಯೊ, ಗುಂಡೂರಾಯ, ಒಳ್ಳೇ ಮಾತಿನಲ್ಲಿ ನನ್ನ ರೂಪಾಯಿ ಕೊಟ್ಟು ಆಚೆಗ್ಹೋಗು. ನಿನ್ನ ದೊಡ್ಡ ಮನುಷ್ಯತನ ಏನಿದ್ರೂ ಆಮೇಲೆ ಯೋಚಿಸ್ತೇನೆ. ಏನ್ರೀ ಪಾರ್ವತಮ್ಮನೋರೇ, ನೋಡಿದಿರೋ ನಿಮ್ಮೆಜಮಾನ್ರು ಚಮತ್ಕಾರಾನ! ನನ್ಹತ್ರಿದ್ದ ನೂರ್ರೂಪಾಯಿ ಹೊರಕ್ಕೆ ತೆಗಿಸಿ ಕಸುಕೊಳ್ಳೋದಕ್ಕೆ ನಮ್ಮ ಈ ಇದೂ, ನಿಮ್ಮ ಆ ಅದೂ, ಎರಡೂ ಸೇರಿ ಹೂಡಿರೋ ತಂತ್ರ! ನೂರ್ರೂಪಾಯಿ ಪಾದಪೂಜೆ ಮಾಡದೇ ಇದ್ರೆ ನಿನ್ನ ಗಂಡನಿಗೆ ಸನ್ಯಾಸ ಕೊಡ್ತೀನೀಂತ ಹೆದರಿಸೀ, ಪಾದಪೂಜೆ ಮಾಡಿಸಿಕೊಂಡೂ, ನಿಂತಿರೋದು ನೋಡಿ ಹಾಗೇ !........ಅಬ್ಬಬ್ಬ !

### ಪಾರ್ವತಮ್ಮ

[ಗಂಡನಿಗೆ] ಇದೇನಿದು ವೇಷ! ಅಲ್ಲಾ, ಯತಿಗಳು ಬಂದಿದಾರೆ, ಪೂಜೆ ಮಾಡೋಣಾಂತ ನಾ ಬಂದ್ರೇ, ನೀವಿಲ್ಲೀ ಅರ್ಜುನ ಸನ್ಯಾಸಿಗಳು! ತಂದಿರೋ ಮಂಗಳಾರ್ತಿ ನಿಮಗೇ ಮಾಡ್ಲೇ? .........
ಆಂ? ಉಪ್ಪು ತರೋದಕ್ಕೆ ತಲೇ ತಪ್ಪಿಸ್ಕೊಂಡು ಮನೇ ಬಿಟ್ಟು ಬಂದು, ಈ ಆಟ ಆಡೋದಕ್ಕೆ ನಿಮಗೆ ನಾಚಿಕೆ ಆಗೋಲ್ವೇ? [ಮೂತಿ ತಿವಿಯುವಳು] ........ ಸುಮ್ಮನೇ ಆಕೇ ದುಡ್ಡು ಆಕೆಗೆ ಕೊಟ್ಟುಬಿಡಿ. ಏನಾದರೂ ಮಾಡ್ಕೊಳ್ಳಿ ........ [ನಿಧಾನವಾಗಿ (ರ) ಎಂಬಲ್ಲಿಗೆ ಬಂದು, ಮತ್ತೆ ಅವಸರವಾಗಿ ಗಂಡನ ಬಳಿಗೆ ಹೋಗಿ] ಅಲ್ಲಾ, ಏನ್ಬಂತೂಂದ್ರೆ ನಿಮಗೆ ಕೇಡೂ? [ಎನ್ನುತ್ತ ಅವನ ಕಿವಿ ಹಿಡಿದು ಕೆಳಕ್ಕೆ ಜಗ್ಗುವಳು. ಅವನು ವಕ್ರವದನನಾಗಿ, ಕಿವಿಯ ಜೊತೆಯಲ್ಲಿ ಕೆಳಕ್ಕೆ ಬಗ್ಗಿ ಏಳುವನು.] ಮನೆಗೆ ಬನ್ನಿ ಈ ಹೊತ್ತು, ಇನ್ನೂ ಇದೆ ನಿಮಗೆ [ಎನ್ನುತ್ತ (ರ) ಎಂಬಲ್ಲಿ ಹಿಂದಿನಂತೆ ನಿಂತುಕೊಳ್ಳುವಳು.]

## ಗುಂಡೂರಾಯ

[ನಡುಗುತ್ತ, ವಕ್ರವಾಗಿ] ಸ್ನೇಹಿತನ ತಗಾದೇ........[ಶಾಮಣ್ಣನ ಕಡೆ ಕೈ ತೋರಿಸುವನು.]

## ಶಾಮಣ್ಣ

[ಹೆದರಿ] ಅಲ್ಲ, ಅಲ್ಲ, ಸಾಹುಕಾರನ ತಗಾದೇ ........

## ಗಂಗಮ್ಮ

ಈಗ ಗಂಗಮ್ಮನ ತಗಾದೆ! .... ಅದೆಲ್ಲಾ ಹಾಗಿರಲಿ, ಗುಂಡೂರಾಯ್ರಾ, ಉದುರಿಸಲ್ಲಿ ದುಡ್ಡು! 'ಕೊಕೊಕೊಕೊ ಕ್ಕೊಟ್ಟದ್ದೂ ಕೊಟ್ಟದ್ದೇ ಸನ್ಯಾಸಾನ; ಯ ಯ ಯ್ಯಾಕೆ ಬಿಡೋದು?" ಅಂದ್ಯಲ್ಲಾ,! ಈಗ ವುವುವುವ್ವುದುರಿಸಿದ್ದೂ ವುವ್ವುದುರಿಸಿದ್ದೇ ರುರುರ್ರೂಪಾಯಿನ, ಯುಯುಯ್ಯಾಕೆ ಬಿಡೋದು? ನಿನಿನ್ನಿಮಜ್ಜನ ಗಂಟೆ?

[ಗುಂಡೂರಾಯನು ಸೊಂಟದಿಂದ ನೋಟು ತೆಗೆಯುತ್ತ ಶಾಮಣ್ಣನ ಕಡೆ ನೋಡುವನು. ಶಾಮಣ್ಣನು 'ಹೋಯಿತಲ್ಲಾ!' ಎಂಬಂತೆ ಕೈ ತಿರುವುವನು. ಆಮೇಲೆ ಗುಂಡೂರಾಯನು ಪಾರ್ವತಮ್ಮನ ಕಡೆ ನೋಡುವನು. ಆಕೆ 'ಕೊಟ್ಟುಬಿಡು' ಎಂಬಂತೆ ಕೈ ತೋರಿಸುವಳು. ನೋಟುಗಳನ್ನು ಕೈಯಲ್ಲಿ ಹಿಡಿದುಕೊಂಡು ಗಂಗಮ್ಮನ ಮುಖವನ್ನು ನೋಡುವನು. ಆಕೆ ಯಜಮಾನ್ಯದಿಂದ ತಲೆದೂಗಿ, ತನ್ನ ಮುಂದಿನ ನೆಲವನ್ನು ಬೆರಳಿನಿಂದ ತೋರಿಸುವಳು. ಗುಂಡೂರಾಯನು ನೋಟುಗಳನ್ನು ಆಕೆ ತೋರಿಸಿದ ಬಳಿ ಇಡುವನು.]

**[ ತೆರೆ ಬೀಳುವುದು ]**

**— ಸಂಪೂರ್ಣ —**

# ಕ್ಷೀರಸಾಗರರ ನಾಟಕಗಳು

| | | | | |
|---|---|---|---|---|
| ನಿತ್ಯನಾಟಕ | ರೂ. | ೦ | ೮ | ೦ |
| ಅಳಿಯನ ಅರೈವಲ್ | | ೦ | ೧೨ | ೦ |
| ನಿಶ್ಚಿತಾರ್ಥ | | ೦ | ೧೨ | ೦ |
| ಶಾಮಣ್ಣನ ಸಾಹಸ | | ೦ | ೧೦ | ೦ |
| ಏಕಪಾತ್ರಾಭಿನಯಗಳು | | | | |
| —ಮಲ್ಲಿಗೇ ಚಪ್ಪರ ಮತ್ತು ಲಾಯರ ಪ್ರಯಾಣ | | ೦ | ೬ | ೦ |
| ನಮ್ಮೂರಿನ ಪಶ್ಚಿಮಕ್ಕೆ | | ೦ | ೬ | ೦ |
| ಚಪ್ಪಾಳೀ ವೈದ್ಯ (ಅಚ್ಚಿನಲ್ಲಿದೆ) | | | | |
| ಸಂಗೀತ ಸಾಮ್ರಾಜ್ಯ ( ,, ) | | | | |



**ಅಪೂರ್ವ ಗ್ರಂಥ ಅಚ್ಚಿನಲ್ಲಿದೆ:**

## ವೀಳ್ಯ

(ಎಂಬ ಮನೋಹರವಾದ ಸಣ್ಣ ಕಥೆಗಳ ಸಂಗ್ರಹ)

**— ಕ್ಷೀರಸಾಗರ ರಚಿತ —**



ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು ನಗರ

ಬೆಂಗಳೂರು ಸಿಟಿ ಕೆ. ಪಿ. ಎಚ್. ಪ್ರೆಸ್ಸಿನಲ್ಲಿ
ಡಿ. ವಿ. ರಾಮರಾಯರಿಂದ ಮುದ್ರಿತವಾದುದು
೫೬೦—೨೦-೩-೪೬—೧,೦೦೦ ಪ್ರತಿಗಳು